# ನವರಾತ್ರಿ ನಿರ್ಣಯ

## ರಿತ್ತಿವೆಂಕಣ್ಣಾಚಾರ್ಯರ ಆಗ್ರಹ


**ಲೇಖಕರು :**

ತರ್ಕವಿದ್ವಾನ್, ಜ್ಯೋತಿಷವಿದ್ವಾನ್, ವೇದಾಂತ
ಶಿರೋಮಣಿ, ಮೈಸೂರು ಆಸ್ಥಾನವಿದ್ವಾನ್, ಪಂಡಿತ
ಭೂಷಣಂ, ವಿದ್ಯಾವಾಚಸ್ಪತಿ, ಶ್ರೀರಾಘವೇಂದ್ರಮಠದ
ಆಸ್ಥಾನ ವಿದ್ವಾನ್.

**ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯ**

ಜ್ಯೋತಿಷಪ್ರಧಾನಾಧ್ಯಾಪಕರು, ಸಂಸ್ಕೃತಮಹಾಪಾಠಶಾಲಾ
ಮದ್ರಾಸ್-600004.



**ಪ್ರಕಾಶಕರು :**

ಮೇನೇಜರ್, ಬೃಂದಾವನಂ ಆಫೀಸ್, ಮಂತ್ರಾಲಯ,
ಕರ್ನೂಲ್ ಜಿಲ್ಲಾ, ಆಂಧ್ರಪ್ರದೇಶ.

1973

# ಸಮರ್ಪಣೆ

ಈ ಚಿಕ್ಕಪುಸ್ತಕವನ್ನು ಶ್ರೀಗಳವರ ಆಜ್ಞೆಯಿಂದ ಬರೆದಿರುವೆನು. ಇದರಲ್ಲಿ ಏನಾದರೂ ಅಪ್ರಾಮಣಿಕವಾದ ವಿಷಯಗಳು ವಾಚಕರಿಗೆ ಕಂಡು ಬಂದರೆ ಅದನ್ನು ನಿರ್ದಾಕ್ಷಿಣ್ಯವಾಗಿ ನನ್ನಲ್ಲಿ ತಿಳಿಸ ಬೇಕು. ಪುನರ್ವಿಮರ್ಶೆ ಮಾಡಿ ಅದು ತಪ್ಪೆಂದು ಸ್ಥಿರವಾದರೆ ತಿದ್ದಿಕೊಳ್ಳುವೆನು. ಸುಮಾರು ಮೂವತ್ತೈದು ವರ್ಷಗಳ ಹಿಂದೆ ಉತ್ತರಾದಿಮಠದ ಶ್ರೀಸತ್ಯಧ್ಯಾನತೀರ್ಥರ ವಿಶೇಷಾನುಗ್ರಹವನ್ನು ಪಡೆದು ಅವರ ಮಠದ ಪಂಚಾಂಗವನ್ನು ರಚಿಸುತ್ತಾ ಅದರಲ್ಲಿ ಧರ್ಮಶಾಸ್ತ್ರನಿರ್ಣಯಗಳನ್ನು ಬರೆಯುತ್ತಿದ್ದೆನು. ಈಗ ಆ ಮಠದ ಪಂಚಾಂಗಕರ್ತರಾಗಿರುವ ಶ್ರೀ ಹುಣಶಿಗಿ ರಾಮಾಚಾರ್ಯರೂ ನನ್ನಿಂದ ತಯಾರಿಕೆಯನ್ನು ಪಡೆದವರು.

ಶ್ರೀ ೧೦೮ ಸುಶೀಲೇಂದ್ರತೀರ್ಥರ ಕಾಲದಲ್ಲಿ ಶ್ರೀರಾಘವೇಂದ್ರಮಠದ ಸಂಬಂಧವು ನನಗೆ ಆರಂಭವಾಯಿತು. ಶ್ರೀ ೧೦೮ ಸುವ್ರತೀಂದ್ರತೀರ್ಥರ ವಿದ್ಯಾಶಿಷ್ಯನಾದೆನು. ಶ್ರೀ ೧೦೮ ಸುಯಮೀಂದ್ರತೀರ್ಥರು ಅವರ ಕಾಲದಲ್ಲಿ ನನಗೆ ಕೊಟ್ಟಿರುವ ಪ್ರೋತ್ಸಾಹವು ಅಸದೃಶವಾದುದು. ಅವರ ಕಾಲದಲ್ಲಿಯೇ ಶ್ರೀರಾಘವೇಂದ್ರಮಠದ ಪಂಚಾಂಗದಲ್ಲಿ ಧರ್ಮಶಾಸ್ತ್ರನಿರ್ಣಯವನ್ನು ಬರೆಯುತ್ತಾ ಮಠದ ಪಂಚಾಂಗದಲ್ಲಿ ಎಲ್ಲಾ ಜವಾಬ್ದಾರಿಕೆಯನ್ನು ಪಡೆದೆನು. ಶ್ರೀ ೧೦೮ ಸುಜಯೀಂದ್ರತೀರ್ಥರ ವಿದ್ಯಾಪಕ್ಷಪಾತದಿಂದ ಈಗ ನನಗೆ ಪ್ರೋತ್ಸಾಹವು ಇನ್ನೂ ಅಧಿಕವಾಯಿತು. ನನ್ನ ನೇತೃತ್ವದಲ್ಲಿ ಹೊರಡುತ್ತಿರುವ ಈ ಪಂಚಾಂಗದಲ್ಲಿರುವ ನಿರ್ಣಯದಲ್ಲಿ ಬಂದಿರುವ ಕುಚೋದ್ಯವನ್ನು ಪರಿಹರಿಸಿ ಜನರಿಗೆ ಈ ಪಂಚಾಂಗದಲ್ಲಿರುವ ಗೌರವಾದರಗಳನ್ನು ಹೆಚ್ಚಿಸುವುದು ನನ್ನ ಮುಖ್ಯ ಕರ್ತವ್ಯವಾಗಿದೆ. ಅದೇ ಈ ಗ್ರಂಥವನ್ನು ಬರೆಯಲು ಮುಖ್ಯಕಾರಣವಾಯಿತು. ಶ್ರೀಗಳವರ ಆಜ್ಞೆಯಿಂದ ಬರೆದಿರುವ ಈ ಚಿಕ್ಕ ಹೊತ್ತಿಕೆಯನ್ನು ಅವರ ಚರಣಾರವಿಂದಗಳಲ್ಲಿ ಸಮರ್ಪಿಸುವೆನು.

ಗ್ರಂಥಕರ್ತ.

# ಶ್ರೀಗಂಲ ಸುಜಯೀಂದ್ರ ತೀರ್ಥರ ಅನುಗ್ರಹವಚನ

ಅಮಾವಾಸ್ಯಾಯುಕ್ತವಾದ ಪಾಡ್ಯದಲ್ಲಿ ಯುಗಾದಿಹಬ್ಬ ನವರಾತ್ರಾರಂಭ ಬಲಿಪಾಡ್ಯ ಮುಂತಾದವುಗಳನ್ನು ಅನುಷ್ಠಿಸುವುದು ತಪ್ಪೆಂದು ಸಾಮಾನ್ಯವಾಗಿ ಜನರಲ್ಲಿ ಮೂಢನಂಬಿಕೆಯು ಬರುವುದು ಸಹಜವಾಗಿದೆ. ಶಾಸ್ತ್ರದಲ್ಲಿ ಸರಿಯಾದ ತಿಳುವಳಿಕೆಯಿಲ್ಲದ ಒಬ್ಬಿಬ್ಬ ಪಂಡಿತರಿಗೂ ತಮ್ಮ ಅಪಪ್ರಚಾರಕ್ಕೆ ಈ ಸಂದರ್ಭವು ಅನುಕೂಲವಾಗಿದೆ.

'ಏಕಾದಶೀದಿನದಲ್ಲಿ ಉಪವಾಸವನ್ನು ಮಾಡಬೇಕು' 'ಅಮಾವಾಸ್ಯಾದಿನದಲ್ಲಿ ತರ್ಪಣವನ್ನು ಕೊಡಬೇಕು' ಮುಂತಾದ ವಿಷಯಗಳಿಗೆ ಶಾಸ್ತ್ರವನ್ನು ಬಿಟ್ಟು ಬೇರೆ ಆಧಾರವನ್ನು ಯಾರಾದರೂ ಹೇಳಬಲ್ಲರೇ? ಅದೇ ಶಾಸ್ತ್ರವು ಅಮಾವಾಸ್ಯಾದಿನದಲ್ಲಿ ಹಬ್ಬವನ್ನು ಮಾಡ ಬೇಕೆಂದು ಹೇಳಿದರೆ ಅದನ್ನು ತಪ್ಪೆಂದು ಹೇಳುವ ಅಧಿಕಾರವು ಯಾರಿಗಿದೆ?

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ**

ಎಂದು ಗೀತಾಚಾರ್ಯನು ಉಪದೇಶಿಸಿದಂತೆ ಶಾಸ್ತ್ರದಲ್ಲಿ ಹೇಳಿದಂತೆ ಅನುಷ್ಠಿಸುವುದಕ್ಕೂ ನಿಷೇಧಿಸಿದ ಕರ್ಮವನ್ನು ಬಿಡುವುದಕ್ಕೂ ನಮಗೆ ಅಧಿಕಾರವೇ ಹೊರತು ಹೆಚ್ಚಿನ ಅಧಿಕಾರವು ನಮಗಿಲ್ಲ. ನವರಾತ್ರಿ ಮುಂತಾದ ಹಬ್ಬಗಳ ವಿಷಯದಲ್ಲಿ ಕೆಲವು ದಿನಗಳಿಂದ ಒಬ್ಬ ವ್ಯಕ್ತಿಯು ಮಾಡುತ್ತಿರುವ ನಿರಾಧಾರವಾದ ಗೊಂದಲದಿಂದ ಸಜ್ಜನರಿಗೆ ಧರ್ಮಸಂಶಯವು ಬಂದೀತೆಂಬ ಭಾವನೆಯಿಂದ ನಮ್ಮಿಂದ ಆಜ್ಞಪ್ತರಾದ ಪಿ. ಪಿ. ಲಕ್ಷ್ಮೀನಾರಾಯಣಉಪಾಧ್ಯಾಯರು ಈ ಚಿಕ್ಕಪುಸ್ತಕವನ್ನು ರಚಿಸಿ ನಮಗೆ ಸಮರ್ಪಿಸಿರುವರು. ಈ ಪುಸ್ತಕವು ಸ್ಮೃತಿಮುಕ್ತಾವಲೀಗ್ರಂಥದಲ್ಲಿ ಬರೆದಿರುವ ಎಲ್ಲಾ ವಿಷಯಗಳನ್ನೂ ಸ್ಪಷ್ಟವಾಗಿ ಆ ಗ್ರಂಥಕ್ಕೆ ಅವಿರುದ್ಧವಾಗಿ ತಿಳಿಸುತ್ತಿದೆ ಎಂದು ಅದನ್ನು ಓದಿ ನಾವು ನಿರ್ಧರಿಸಿರುವೆವು. ಈ ಗ್ರಂಥವು ನಮ್ಮ ಮಠದ ಶಿಷ್ಯರಿಗೆ ಅನುಷ್ಠಾನದಲ್ಲಿರುವ ಸಂಶಯವನ್ನು ಪರಿಹರಿಸಲಿ. ಗ್ರಂಥಕಾರರಿಗೂ ಮಂಗಳವಾಗಲಿ.

ಇತಿ ಶ್ರೀಮನ್ನಾರಾಯಣ ಸ್ಮರಣೆಗಳು
ಶ್ರೀಸುಜಯೀಂದ್ರತೀರ್ಥರು.

10-2-73
ಮೊಕ್ಕಾಂ, ಮಂತ್ರಾಲಯ.

# ವಿಷಯಾನುಕ್ರಮಣಿಕೆ

ಪುಟ

---

ಶ್ರೀಃ

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ
ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ
ಶ್ರೀಭಾವಿಸಮೀರಶ್ರೀವಾದಿರಾಜಗುರುಭ್ಯೋ ನಮಃ
ಶ್ರೀರಾಘವೇಂದ್ರತೀರ್ಥಗುರುಭ್ಯೋ ನಮಃ

# ನವರಾತ್ರಿ ನಿರ್ಣಯ

## ರಿತ್ತಿವೆಂಕಟಾಚಾರ್ಯರ ಆಗ್ರಹ

ಇವರು ಸುಮಾರು ನಾಲ್ಕುವರ್ಷಗಳ ಹಿಂದೆ ಮಂತ್ರಾಲಯಕ್ಕೆ ಬಂದಿದ್ದರು. ಮಠದ ಪಂಚಾಂಗವನ್ನು ಖಂಡಿಸುವುದಾಗಿ ಪ್ರತಿಜ್ಞೆ ಮಾಡಿದರು. ಒಂದೆರಡು ಪ್ರಶ್ನೆಗಳನ್ನು ಕೇಳಿದರು. ಅವರ ಆಕ್ಷೇಪಣೆಗಳಿಗೆ ಪಂಚಾಂಗದಲ್ಲಿಯೇ ಬರೆಯಲ್ಪಟ್ಟ ಉತ್ತರವನ್ನು ಓದಿ ಹೇಳಿದೆನು. 'ನಾನು ಪಂಚಾಂಗವನ್ನು ಸರಿಯಾಗಿ ಓದಿಲ್ಲ. ಚೆನ್ನಾಗಿ ಓದಿ ಉತ್ತರಗಳನ್ನೂ ಸಿದ್ಧಪಡಿಸಿಕೊಂಡು ಇನ್ನೊಮ್ಮೆ ಯುದ್ಧಕ್ಕಾಗಿ ಬರುವೆನು' ಎಂದು ಹೇಳಿ ಹಿಂದಿರುಗಿದರು. ಪಂಚಾಂಗವನ್ನೇ ಸರಿಯಾಗಿ ಓದದೆ ಪಂಚಾಂಗವನ್ನು ಖಂಡಿಸುವುದಕ್ಕಾಗಿ ಬಂದಿರುವ ಇವರಲ್ಲವೇ ಧೀರರು ?

ಮೈಸೂರಿನಿಂದ ಶ್ರೀಗಳವರಿಗೆ ತಿಂಗಳಿಗೊಮ್ಮೆ ಒಂದೊಂದು ಕಾಗದವನ್ನು ಬರಿಯುತ್ತಾ ಬಂದರು. ಅದರಲ್ಲಿ ಪಂಚಾಂಗವನ್ನು ಖಂಡಿಸುವುದಕ್ಕಾಗಿಯೇ ಮೈಸೂರು ಸಂಸ್ಕೃತಮಹಾಪಾಠಶಾಲೆಯಲ್ಲಿ ಧರ್ಮಶಾಸ್ತ್ರವನ್ನು ಓದುತ್ತಿರುವುದಾಗಿಯೂ ಅದಕ್ಕಾಗಿ ಮಂತ್ರಾಲಯಕ್ಕೆ ಬರುವುದಾಗಿಯೂ ಪತ್ರವನ್ನು ಬರೆಯುತ್ತಿದ್ದರು. 1972 ನೇ ಇಸ್ವಿ ಮೇ ತಿಂಗಳಿನಲ್ಲಿ ಮಂತ್ರಾಲಯಕ್ಕೆ ಬಂದರು. ನನ್ನನ್ನು ಕರೆತರಿಸ ಬೇಕೆಂದೂ ಶಾಸ್ತ್ರಾರ್ಥ ವಿಚಾರಕ್ಕೆ ಸಿದ್ಧನಾಗಿ ಬಂದಿರುವುದಾಗಿಯೂ ಶ್ರೀಗಳವರಲ್ಲಿ ನಚ್ಚರಿಸಿದರು. ಶ್ರೀಗಳವರು ನನಗೆ ತಂತಿಯನ್ನು ಕೊಟ್ಟರು. ಅದರಂತೆ ನಾನೂ ಹೋದೆನು. ನಾನು ಅಲ್ಲಿಗೆ ಹೋದಾಗ ಹಿಂದಿನ ದಿನದಲ್ಲಿಯೇ ಮೈಸೂರಿಗೆ ಹೋದಂತೆ ತಿಳಿಯಿತು. ಇದಲ್ಲವೇ ಅವರ ಶಾಸ್ತ್ರಾರ್ಥವಿಚಾರತಂತ್ರ.

ನಾನು ಅಲ್ಲಿಗೆ ಹೋದ ದಿನದಲ್ಲಿಯೇ ಶ್ರೀಗಳವರು ಅವರಿಗೆ ತಂತಿ ಯನ್ನು ಕೊಡಿಸಿದರು. ಉಪಾಯವಿಲ್ಲದೆ ಅವರೂ ಬಂದರು. ಜೂನ್ 5. ಮತ್ತು 6 ನೇ ದಿನಗಳಲ್ಲಿ ಶ್ರೀಗಳವರ ಅಧ್ಯಕ್ಷತೆಯಲ್ಲಿ ಮಠದ ಆಸ್ಥಾನ ಪಂಡಿತರುಗಳ ಮಧ್ಯಸ್ಥಿಕೆಯಲ್ಲಿ ಶಾಸ್ತ್ರಾರ್ಥವಿಚಾರವು ನಡೆಯಿತು. ಕೊನೆಗೆ ಅವರು ಪರಾಜಿತರಾದರು. ಅವರಿಗೂ ನನಗೂ ಆದ ಶಾಸ್ತ್ರಾರ್ಥವಿಚಾರದ ಸಾರವನ್ನು ಮಧ್ಯಸ್ಥರು ಸಂಕ್ಷೇಪವಾಗಿ ಬರೆದರು. ಅದರಲ್ಲಿ ನಾವಿಬ್ಬರೂ ಹಸ್ತಾಂಕನವನ್ನು ಮಾಡಿರುವೆವು. ಆ ಪತ್ರವು ನನ್ನಲ್ಲಿದೆ. ಆ ಶಾಸ್ತ್ರಾರ್ಥ ವಿಚಾರದ ಸಾರವು 1972 ನೇ ಇಸ್ವಿ ಆಗಷ್ಟ್ ಮತ್ತು ಸಪ್ಟಂಬರ್ ತಿಂಗಳು ಗಳ ಗುರುಸಾರ್ವಭೌಮ ಪತ್ರಿಕೆಯ ಸಂಯುಕ್ತಸಂಚಿಕೆಯಲ್ಲಿ ಪ್ರಕಟಿತ ವಾಗಿದೆ. ಅದನ್ನು ಓದಿದರೆ ವಾಚಕರಿಗೆ ಇವರ ಪಾಂಡಿತ್ಯದ ಆಳವು ಚೆನ್ನಾಗಿ ತಿಳಿಯುತ್ತದೆ. ಇವರಲ್ಲವೇ ಪಂಚಾಂಗವನ್ನು ಖಂಡಿಸಿ ಜಯಭೇರಿಯನ್ನು ಹೊಡೆಯಿಸಿದ ವೀರಾಗ್ರಣಿಗಳು.

ಶಾಸ್ತ್ರಾರ್ಥವಿಚಾರದಲ್ಲಿ ಪರಾಜಿತರಾದವರು ಶ್ರೀಗಳವರ ಕಾಲಿನಲ್ಲಿ ಅಡ್ಡಬಿದ್ದರು. 'ನಾನು ಪಂಚಾಂಗವನ್ನು ಖಂಡಿಸುವುದಕ್ಕಾಗಿ ಬಂದವನಲ್ಲ. ಅದರಲ್ಲಿ ನನಗಿದ್ದ ಕೆಲವು ಸಂಶಯಗಳನ್ನು ಪರಿಹರಿಸಿಕೊಳ್ಳಲು ಬಂದಿರುವ ವಿದ್ಯಾರ್ಥಿ. ನನ್ನ ಸಂಶಯಗಳೆಲ್ಲಾ ಹೋದುವು. ಇನ್ನು ಉಪಾಧ್ಯಾಯರು ಊರಿಗೆ ಹೋಗಬಹುದು' ಎಂದು ಹೇಳಿದರು. ಶ್ರೀಗಳವರಿಂದ ಮಂತ್ರಾಕ್ಷತೆ ಯನ್ನು ಪಡೆದು ನಾವಿಬ್ಬರೂ ಅಲ್ಲಿಂದ ಹೊರಟೆವು. ಇದಲ್ಲವೇ ತನ್ನ ಪರಾ ಜಯವನ್ನು ಮುಚ್ಚಿಕೊಳ್ಳುವ ಉಪಾಯ.

1972 ನೇ ವರ್ಷ ಆಕ್ಟೋಬರ್ ತಿಂಗಳಿನಲ್ಲಿ ಕನ್ನಡಪ್ರಭ ಪತ್ರಿಕೆ ಯಲ್ಲಿ ಎರಡು ಲೇಖನಗಳನ್ನೂ ಸ್ವಂತವಾಗಿ ಒಂದು ಕರಪತ್ರವನ್ನೂ ಈಗ ಕೆಲದಿನಗಳ ಹಿಂದೆ 'ನವರಾತ್ರಿ ನಿರ್ಣಯದ ಬಗ್ಗೆ ಆಗ್ರಹವೇ' ಎಂಬ ಶೀರ್ಷಕದ ಚಿಕ್ಕಪುಸ್ತಕವನ್ನೂ ಪ್ರಕಟಿಸಿದರು. ಅದರಲ್ಲಿ ಮಂತ್ರಾಲಯ ದಲ್ಲಿ ಅವರು ಕೇಳಿರುವ ವಿಷಯವನ್ನೇ ಪುನಃ ಬರೆದಿರುವರು. ಅದಕ್ಕೆ ನಾವು ಕೊಟ್ಟಿರುವ ಉತ್ತರವನ್ನೂ ಅದಕ್ಕೆ ಪ್ರತ್ಯುತ್ತರವನ್ನು ಕೊಡದೆ ನಿರುತ್ತರ ರಾದ ವಿಷಯವನ್ನೂ ಮುಚ್ಚಿರುವರು. ಇದಲ್ಲವೇ ಧರ್ಮಶಾಸ್ತ್ರವನ್ನು ತಿಳಿಯದಿರುವ ಸಾಮಾನ್ಯಜನರನ್ನು ವಂಚಿಸುವ ಸಾಹಸ.

ಇವರ ಎಲ್ಲಾ ಲೇಖನಗಳಲ್ಲಿಯೂ ಅವರು ನನ್ನಲ್ಲಿ ವಿಮರ್ಶಿಸಿ ನಿರುತ್ತರರಾದ ವಿಷಯವೇ ಹೊರತು ಹೊಸವಿಷಯವು ಒಂದೂ ಇಲ್ಲ. ಆ ಲೇಖನಕ್ಕೂ ನಾನೂ ಬೃಂದಾವನ ಆಫೀಸಿನ ಮೋನೇಜರರೂ ಮಠದ ಆಸ್ಥಾನವಿದ್ವಾಂಸರುಗಳೂ ಪ್ರತ್ಯೇಕವಾಗಿ ಪ್ರತ್ಯುತ್ತರವನ್ನು ಪ್ರಕಟಿಸಿರುವೆವು. ಆದರೂ ಅವರು ತನ್ನ ವಿತಂಡಾವಾದವನ್ನು ಬಿಟ್ಟಿಲ್ಲ. ಇಂತಹ ಜುಗುಪ್ಸಿತವಾದ ಲೇಖನಗಳಿಗೆ ಪ್ರತ್ಯುತ್ತರವನ್ನು ಕೊಡುವುದು ಅಗೌರವಾರ್ಹವಾದುದು. ಆದರೂ ಧರ್ಮಶಾಸ್ತ್ರವನ್ನು ತಿಳಿಯದಿರುವ ಸಾಮಾನ್ಯ ಜನರಿಗೆ ಭ್ರಾಮಕವಾಗಿರುವುದರಿಂದ ಅದಕ್ಕೆ ಈಗ ಪ್ರತ್ಯುತ್ತರವನ್ನು ನೀಡುವೆನು. ಆರಂಭದಲ್ಲಿ ಅವರಿಗೆ ಧರ್ಮಶಾಸ್ತ್ರದಲ್ಲಿರುವ ಜ್ಞಾನದ ಮಟ್ಟವನ್ನು ತಿಳಿಸುವುದಕ್ಕಾಗಿ ಅವರ ಲೇಖನದಲ್ಲಿರುವ ಕೆಲವು ವ್ಯಾಹತಭಾಷಣಗಳನ್ನು ಎತ್ತಿ ತೋರಿಸುವೆನು.

ಕನ್ನಡಪ್ರಭ (5-10-1972)—(1) "ನವರಾತ್ರಿ ಪಾಡ್ಯದ ಪ್ರಯುಕ್ತ ನಡೆಯುವ ಪೂಜೆಯ ವಿಷಯದಲ್ಲಿ ಆ ಪಾಡ್ಯದ ತಿಥಿಯು ಸೂರ್ಯೋದಯದಿಂದ ಮಧ್ಯಾಹ್ನವ್ಯಾಪಿನಿಯಾಗಿ ದೊರೆಯದಿದ್ದರೆ ಪೂರ್ವದಿನವೇ ಸಾಯಾಹ್ನವ್ಯಾಪಿನಿಯಾಗಿದ್ದರೂ ಆಚರಿಸಬೇಕು."

ಕನ್ನಡಪ್ರಭ (5-10-1972)—(2) "ಅಮಾಯುಕ್ತವಾದ ಪಾಡ್ಯದ ದಿನ ನವರಾತ್ರಿ ಪ್ರಯುಕ್ತ ದುರ್ಗಾಪೂಜೆಯನ್ನು ಪ್ರಾರಂಭಿಸಬಾರದು. ಮಾರನೆಯ ದಿನ ಎರಡು ಗಳಿಗೆ ಮಾತ್ರ ಪಾಡ್ಯವಿದ್ದು ಬಿದಿಗೆ ಸಹಿತವಾಗಿದ್ದರೆ ಅಂದಿನ ಪೂಜೆಯು ಗುಣಯುಕ್ತವಾಗುತ್ತದೆ."

ನವರಾತ್ರಿ ನಿರ್ಣಯದಲ್ಲಿ ಆಗ್ರಹವೇ? (ಪುಟ 14) (3) "ಮರುದಿನದಲ್ಲಿ ಸ್ವಲ್ಪವೂ ಪಾಡ್ಯವು ಸಿಗದಿದ್ದರೆ ಪೂರ್ವದಿನದಲ್ಲಿ ಹಬ್ಬವನ್ನು ಮಾಡಿದರೆ ಯಾವ ದೋಷವೂ ಇಲ್ಲ."

(1) "ಪಾಡ್ಯದಿನದಲ್ಲಿ ಪಾಡ್ಯತಿಥಿಯು ಮಧ್ಯಾಹ್ನವ್ಯಾಪಿನಿಯಾಗಿದ್ದರೆ ಪಾಡ್ಯದಿನದಲ್ಲಿಯೇ ಹಬ್ಬವನ್ನು ಮಾಡಬೇಕು. ಅಮಾವಾಸ್ಯಾದಿನದಲ್ಲಿ ಮಾಡಬಾರದು. ಪಾಡ್ಯದಿನದಲ್ಲಿ ಮಧ್ಯಾಹ್ನಕ್ಕಿಂತ ಒಂದು ಪಳ ಕಡಿಮೆಯಾಗಿದ್ದರೂ ಪಾಡ್ಯದಿನದಲ್ಲಿ ಹಬ್ಬವನ್ನು ಮಾಡಬಾರದು. ಅಮಾ

ವಾಸ್ಯಾದಿನದಲ್ಲಿಯೇ ಹಬ್ಬವನ್ನು ಮಾಡಬೇಕು." ಇದು ಅವರ ಮೊದಲನೆಯ ಸಿದ್ಧಾಂತ ಎಂಬ ವಿಷಯವು ಗಮನಾರ್ಹ.

(2) "ಪಾಡ್ಯದಿನದಲ್ಲಿ ಪಾಡ್ಯತಿಥಿಯು ಮಧ್ಯಾಹ್ನಕ್ಕಿಂತ ಕಡಿಮೆಯಾಗಿದ್ದರೂ ಅಡ್ಡಿಯಿಲ್ಲ. ಅಂದು ಸೂರ್ಯೋದಯಾನಂತರದಲ್ಲಿ ಎರಡು ಗಳಿಗೆಗಳಿಗಿಂತ ಅಧಿಕವಾಗಿದ್ದರೆ ಅಂದೇ ಹಬ್ಬವನ್ನು ಮಾಡಬೇಕು. ಅಮಾವಾಸ್ಯಾದಿನದಲ್ಲಿ ಮಾಡಬಾರದು. ಪಾಡ್ಯದಿನದಲ್ಲಿ ಸೂರ್ಯೋದಯಾನಂತರದಲ್ಲಿ ಎರಡು ಗಳಿಗೆಗಳಿಗಿಂತ ಕಡಿಮೆಯಾಗಿದ್ದರೆ ಅಂದು ಹಬ್ಬವನ್ನು ಮಾಡಬಾರದು. ಅಮಾವಾಸ್ಯಾದಿನದಲ್ಲಿಯೇ ಮಾಡಬೇಕು." ಇದು ಎರಡನೆಯ ಸಿದ್ಧಾಂತ. ಈ ಸಿದ್ಧಾಂತವು ಮೊದಲನೆಯ ಸಿದ್ಧಾಂತಕ್ಕೆ ವಿರುದ್ಧ ಎಂಬ ವಿಷಯವು ಗಮನಾರ್ಹ. ಈ ಎರಡು ಪರಸ್ಪರ ವಿರುದ್ಧವಾದ ಸಿದ್ಧಾಂತಗಳು ಒಂದೇ ಲೇಖನದಲ್ಲಿವೆ ಎಂಬ ಅಂಶವೂ ಗಮನಾರ್ಹ.

(3) "ಪಾಡ್ಯದಿನದಲ್ಲಿ ಪಾಡ್ಯತಿಥಿಯು ಸೂರ್ಯೋದಯಾನಂತರದಲ್ಲಿ ಎರಡು ಗಳಿಗೆಗಳಿಗಿಂತ ಕಡಿಮೆಯಾಗಿದ್ದರೂ ಅಡ್ಡಿಯಿಲ್ಲ. ಸೂರ್ಯೋದಯಾನಂತರದಲ್ಲಿ ಒಂದು ಪಳವಾದರೂ ಇದ್ದರೆ ಅಂದೇ ಹಬ್ಬವನ್ನು ಮಾಡಬೇಕು. ಅಮಾವಾಸ್ಯಾದಿನದಲ್ಲಿ ಮಾಡಬಾರದು. ಸೂರ್ಯೋದಯಾನಂತರದಲ್ಲಿ ಒಂದು ಪಳವೂ ಇಲ್ಲದಿದ್ದರೆ ಅಂದು ಹಬ್ಬವನ್ನು ಮಾಡಕೂಡದು. ಅಮಾವಾಸ್ಯಾ ದಿನದಲ್ಲಿಯೇ ಮಾಡಬೇಕು" ಇದು ಮೂರನೆಯ ಸಿದ್ಧಾಂತ. ಈ ಸಿದ್ಧಾಂತವು ಮೊದಲನೆಯ ಎರಡು ಸಿದ್ಧಾಂತಗಳಿಗೂ ವಿರುದ್ಧ ಎಂಬ ಅಂಶವು ಗಮನಾರ್ಹ.

ಈ ಮೂರನೆಯ ಸಿದ್ಧಾಂತವು ಅವರ ಹೇಳಿಕೆಯಂತೆ ಅವರ ವಿಮರ್ಶಾತ್ಮಕವಾದ ಲೇಖನಗಳಲ್ಲಿ ಕೊನೆಯ ಲೇಖನದಲ್ಲಿ ಬರೆಯಲ್ಪಟ್ಟಿರುವ ಕೊನೆಯ ತೀರ್ಮಾನ ಎಂಬ ವಿಷಯವು ಗಮನಾರ್ಹ. ಆದರೆ ಅವ್ಯವಸ್ಥಿತವಾದ ಬುದ್ಧಿ ಶಕ್ತಿಯಲ್ಲಿ ಇಂತಹ ಪರಸ್ಪರವಿರುದ್ಧವಾದ ತೀರ್ಮಾನಗಳು ಮುಂದೆ ಎಷ್ಟೋ ಹೊರಡಲಿವೆ ಎಂಬ ನಂಬಿಕೆಯು ವಿಮರ್ಶಕರಿಗೆ ಏರ್ಪಡದಿರಲಾರದು ಎಂಬ ಅಂಶವು ಗಮನಾರ್ಹ.

ಈ ಕೊನೆಯ ತೀರ್ಮಾನದಲ್ಲಿ ಒಂದೆರಡು ವಿಷಯವನ್ನು ಗಮನಿಸಬೇಕಾಗಿದೆ. ಯಾವ ತಿಥಿಯೇ ಆಗಲಿ. ಸೂರ್ಯೋದಯಾನಂತರದಲ್ಲಿ ಒಂದು

ಷಳವೂ ಇಲ್ಲದಿರುವಾಗ ಆ ದಿನದಲ್ಲಿ ಆ ತಿಥಿಯಲ್ಲಿ ಮಾಡಬೇಕಾದ ಹಬ್ಬ ಮುಂತಾದವುಗಳನ್ನು ಅನುಷ್ಠಿಸುವ ಪ್ರಸಕ್ತಿ ಇದೆಯೇ? ಪ್ರಸಕ್ತಿ ಇದ್ದರೆ ಅಂತಹ ಉದಾಹರಣ ಯಾವುದು? ಆ ಉದಾಹರಣವನ್ನು ಇವರು ಕೊಡ ಬಲ್ಲರೇ? ಯಾವುದಾದರೊಂದು ತಿಥಿಯು ಎರಡು ದಿನಗಳಲ್ಲಿಯೂ ಇದ್ದಾಗ ಹಿಂದಿನ ದಿನದಲ್ಲಿ ಆ ತಿಥಿಯಲ್ಲಿ ಮಾಡಬೇಕಾದ ಹಬ್ಬ ಮುಂತಾದವುಗಳನ್ನು ಮಾಡಬೇಕೇ? ಮುಂದಿನ ದಿನದಲ್ಲಿ ಮಾಡಬೇಕೇ? ಎಂಬ ಸಂಶಯವು ಬರುತ್ತದೆ. ಅಂತಹ ಸಂದರ್ಭದಲ್ಲಿ ಧರ್ಮಶಾಸ್ತ್ರಕಾರರು ಪ್ರಮಾಣಗಳ ಆಧಾರದಿಂದ ಆ ತಿಥಿಯಲ್ಲಿ ಮಾಡಬೇಕಾದ ಕಾರ್ಯಗಳನ್ನು ಹಿಂದಿನ ದಿನ ದಲ್ಲಿ ಮಾಡಬೇಕೇ? ಮುಂದಿನ ದಿನದಲ್ಲಿ ಮಾಡಬೇಕೇ? ಎಂಬ ನಿರ್ಣಯ ವನ್ನು ಮಾಡುತ್ತಿರುವರು. ಎರಡು ದಿನಗಳಲ್ಲಿಲ್ಲದೆ ಒಂದೇ ದಿನದಲ್ಲಿರುವ ತಿಥಿಗಳಿಗಾಗಿ ಯಾವ ಧರ್ಮಶಾಸ್ತ್ರಕಾರರೂ ನಿರ್ಣಯವನ್ನು ಬರೆಯುವ ಅವಶ್ಯವೂ ಇಲ್ಲ. ಬರೆಯಲೂ ಇಲ್ಲ. ಆದ್ದರಿಂದ ಪಾಡ್ಯದಿನದಲ್ಲಿ ಸೂರ್ಯೋ ದಯಾನಂತರದಲ್ಲಿ ಪಾಡ್ಯತಿಥಿಯು ಒಂದು ಪಳವೂ ಇಲ್ಲದಿರುವಾಗ ಅಮಾ ವಾಸ್ಯಾದಿನದಲ್ಲಿಯೇ ಹಬ್ಬವನ್ನು ಮಾಡಬೇಕೆಂದು ಸ್ಮೃತಿಮುಕ್ತಾವಲೀ ಕಾರರು ನಿರ್ಣಯಿಸಿರುವರೆಂದು ಹೇಳಿರುವುದು ಇವರಿಗೆ ಧರ್ಮಶಾಸ್ತ್ರದ ವಿಷಯದಲ್ಲಿ ಆರಂಭಪಾಠವೂ ಗೊತ್ತಿಲ್ಲ ಎಂಬ ವಿಷಯಕ್ಕೆ ಆಧಾರವಾಗಿದೆ. ಆದ್ದರಿಂದ ಮೇಲ್ಕಂಡ ಮೂರನೆಯ ಮತ್ತು ಕೊನೆಯ ಸಿದ್ಧಾಂತವು ಅವರು ತನ್ನಲ್ಲಿರುವುದಾಗಿ ಘೋಷಿಸುತ್ತಿರುವ **ಧರ್ಮಶಾಸ್ತ್ರವಿದ್ವಾನ್** ಎಂಬ ಬಿರುದಿನ ರಹಸ್ಯವನ್ನು ತಿಳಿಸುತ್ತದೆ.

ಮೇಲ್ಕಂಡ ವಿವರಣದಿಂದ ಪಾಡ್ಯದಿನದಲ್ಲಿಯೂ ಅಮಾವಾಸ್ಯಾದಿನ ದಲ್ಲಿಯೂ ಪಾಡ್ಯತಿಥಿಯು ಇದ್ದಾಗಲೇ ಸ್ಮೃತಿಮುಕ್ತಾವಲೀಕಾರರಾಗಲೀ ಇತರ ಧರ್ಮಶಾಸ್ತ್ರಕಾರರಾಗಲೀ ನಿರ್ಣಯಮಾಡಲು ಹೊರಟಿರುವರೇ ಹೊರತು ಪಾಡ್ಯತಿಥಿಯಲ್ಲಿ ಒಂದು ಪಳವೂ ಇಲ್ಲದಿರುವಾಗ ನಿರ್ಣಯವನ್ನು ಮಾಡಲು ಹೊರಡಲಿಲ್ಲ. ಈ ರೀತಿಯವರ ತೀರ್ಮಾನದಷ್ಟು ಮೋಸವಾದ ತೀರ್ಮಾನವನ್ನು ಹುಚ್ಚನೂ ಮಾಡಲಾರನೆಂದು ಸ್ಪಷ್ಟವಾಗುತ್ತದೆ. ಇಂತಹ ತೀರ್ಮಾನವನ್ನು ಕೊನೆಯ ತೀರ್ಮಾನವೆಂದು ಬರೆದಿರುವ ಇವರಲ್ಲವೇ ಧರ್ಮಶಾಸ್ತ್ರವಿದ್ವಾಂಸರು?

(4) ನವರಾತ್ರಿನಿರ್ಣಯದ ಬಗ್ಗೆ ಆಗ್ರಹವೇ? (ಪುಟ 10)—
"ನವರಾತ್ರಿ ಆರಂಭವನ್ನು ಬಿದಿಗೆ ಯುಕ್ತ ಪಾಡ್ಯದಲ್ಲಿ ಮಾಡುವುದು ಶತ ಯಜ್ಞಫಲವನ್ನು ಕೊಡುತ್ತದೆ. ಬಿದಿಗೆ ಯುಕ್ತವಾಗಿ ಮಾಡದೆ ಅಮಾಯುಕ್ತವಾಗಿ ಮಾಡಿದರೆ ದೇವೀಪುರಾಣವಚನವು ಮಹತ್ತರವಾದ (ಪುತ್ರ ನಾಶ ಸಂಪತ್ತಿನ ನಾಶ ಮುಂತಾದ) ದೋಷವನ್ನು ಹೇಳುತ್ತದೆ."

"ಬಿದಿಗೆ ಯುಕ್ತವಾದ ಪಾಡ್ಯದಲ್ಲಿ ಹಬ್ಬವನ್ನು ಮಾಡಬೇಕು. ಅಮಾವಾಸ್ಯೆಯಿಂದ ಯುಕ್ತವಾದ ಪಾಡ್ಯದಲ್ಲಿ ಮಾಡಬಾರದು." ಇದು ಅವರ ನಾಲ್ಕನೆಯ ಸಿದ್ಧಾಂತ. ಈ ಸಿದ್ಧಾಂತವು "ಪಾಡ್ಯದಿನದಲ್ಲಿ ಮಧ್ಯಾಹ್ನಕ್ಕಿಂತ ಪಾಡ್ಯವು ಕಡಿಮೆಯಾಗಿದ್ದರೆ ಬಿದಿಗೆಯಿಂದ ಯುಕ್ತವಾಗಿದ್ದರೂ ಅಮಾವಾಸ್ಯಾದಿನದಲ್ಲಿಯೇ ಹಬ್ಬವನ್ನು ಮಾಡಬೇಕು. ಬಿದಿಗೆಯಿಂದ ಯುಕ್ತವಾಗಿರುವ ಪಾಡ್ಯದಿನದಲ್ಲಿ ಮಾಡಕೂಡದು." ಎಂಬ ಮೊದಲನೆಯ ಸಿದ್ಧಾಂತಕ್ಕೆ ವಿರುದ್ಧವಾಗಿದೆ ಮತ್ತು "ಪಾಡ್ಯವು ಎರಡುಗಳಿಗೆಗಳಿಗಿಂತ ಕಡಿಮೆಯಾಗಿದ್ದಾಗ ಬಿದಿಗೆಯಿಂದ ಯುಕ್ತವಾಗಿದ್ದರೂ ಅಂದು ಹಬ್ಬವನ್ನು ಮಾಡಕೂಡದು ಅಮಾವಾಸ್ಯಾದಿನದಲ್ಲಿಯೇ ಮಾಡಬೇಕು." ಎಂಬ ಎರಡನೆಯ ಸಿದ್ಧಾಂತಕ್ಕೂ ವಿರುದ್ಧವಾಗಿದೆ ಎಂಬ ಅಂಶವು ಗಮನಾರ್ಹ.

ಹಿಂದಿನ ಮೂರನೆಯ ಸಿದ್ಧಾಂತವನ್ನು ಸ್ಥಾಪಿಸುವಾಗ 'ಅಮಾವಾಸ್ಯಾದಿನದಲ್ಲಿ ಹಬ್ಬವನ್ನು ಮಾಡಿದರೂ ದೋಷವಿಲ್ಲ' ಎಂದು ಹೇಳಿರುವರು. ನಾಲ್ಕನೆಯ ಸಿದ್ಧಾಂತವನ್ನು ಸ್ಥಾಪಿಸುವಾಗ 'ಮಹತ್ತರವಾದ ದೋಷವಿದೆ' ಎಂದು ಹೇಳುತ್ತಿರುವರು. ಈ ವಾಕ್ಯಗಳು ಪರಸ್ಪರ ವಿರುದ್ಧವಾಗಿವೆ ಎಂಬ ವಿಷಯವು ಗಮನಾರ್ಹ.

ಇದರಂತೆ ಅವರ ವಿಮರ್ಶಾತ್ಮಕವಾದ ಪುಸ್ತಕದಲ್ಲಿ ಇಂತಹ ಪರಸ್ಪರ ವಿರುದ್ಧವಾದ ಸಿದ್ಧಾಂತಗಳು ಎಷ್ಟೋ ಇವೆ. ಅವುಗಳನ್ನೆಲ್ಲವನ್ನೂ ಎತ್ತಿ ತೋರಿಸುತ್ತಾ ಬರುವುದಕ್ಕಿಂತ ವಾಚಕರು ಇನ್ನೊಮ್ಮೆ ಅವರ ಲೇಖನಗಳನ್ನು ಸ್ವತಃ ಓದಿದರೆ ಅವರಿಗೆ ನನ್ನ ಮಂದಬುದ್ಧಿಗೆ ತೋರಿರುವ ಪರಸ್ಪರ ವಿರುದ್ಧವಾದ ಸಿದ್ಧಾಂತಗಳ ಸಂಖ್ಯೆಗಿಂತ ಅಧಿಕವಾದ ಸಿದ್ಧಾಂತಗಳು ತಿಳಿಯುವುದರಲ್ಲಿ ಸಂಶಯವಿಲ್ಲ.

ಶ್ರೀರಿತ್ತಿ ಆಚಾರ್ಯರು ಮಂತ್ರಾಲಯದಲ್ಲಿ ನನ್ನೊಡನೆ ಶಾಸ್ತ್ರಾರ್ಥ ವಿಚಾರವನ್ನು ಮಾಡಿ ಮುಗಿಸಿದ ಮೇಲೆ ತನಗೆ ಒಂದು ಬಿರುದನ್ನು ಕೊಡುವಂತೆ ಶ್ರೀಗಳವರಲ್ಲಿ ಶಿಫಾರಿಸು ಮಾಡಬೇಕೆಂದು ನನ್ನಲ್ಲಿ ಹೇಳಿದರು. ನಾನೂ ಶ್ರೀಗಳವರಲ್ಲಿ ಪ್ರಸ್ತಾಪಿಸಿದೆ. ಪರಾಜಿತನಾದವನಿಗೆ ಬಿರುದನ್ನು ಕೊಡುವುದು ಯುಕ್ತವಲ್ಲವೆಂದು ಶ್ರೀಗಳವರು ಹೇಳಿದರು. ಅದಕ್ಕಾಗಿ ಶ್ರೀಆಚಾರ್ಯರು ಇಂತಹ ಲೇಖನಗಳನ್ನು ಹೆಚ್ಚಿನ ಸಂಖ್ಯೆಯಿಂದ ಪುನಃ ಪುನಃ ಬರೆಯುತ್ತಾ 'ವ್ಯಾಹತಿವಾರಿಧಿ' ಎಂಬ ಬಿರುದನ್ನು ತಾವೇ ಪಡೆದಿರುವುದಕ್ಕಾಗಿ ಅವರಿಗೆ ಧನ್ಯವಾದವನ್ನು ಸಮರ್ಪಿಸುವೆನು.

ಅವರ ಲೇಖನಗಳಲ್ಲಿ ಅಪ್ರಕೃತವಾದ ಎಷ್ಟೋ ವಿಷಯಗಳನ್ನು ಬರೆದಿರುವರು. ಅದರಿಂದ ಅವರ ಅಜ್ಞಾನ ಭಂಡಾರವನ್ನು ಪ್ರಕಟಿಸಿರುವರು. ಇದರಿಂದ ಆ ಭಾಗಕ್ಕೆ ಉತ್ತರವನ್ನು ಕೊಡುವ ಭಾರವನ್ನು ನನಗೆ ಕಡಿಮೆಯಾಗುವಂತೆ ಮಾಡಿರುವರು. ಅದಕ್ಕಾಗಿ ನಾನು ಅವರಲ್ಲಿ ನನ್ನ ಕೃತಜ್ಞತೆಯನ್ನು ಸಮರ್ಪಿಸುವೆನು.

(1) ಈಗ ನವರಾತ್ರಿ ನಿರ್ಣಯದ ವಿಷಯದಲ್ಲಿ ಗಮನಿಸ ಬೇಕಾದ ಒಂದೊಂದು ವಿಷಯಗಳನ್ನು ವಿಮರ್ಶಿಸುತ್ತೇನೆ. ನವರಾತ್ರಿ ಹಬ್ಬವನ್ನು ಅಮಾವಾಸ್ಯಾದಿನದಲ್ಲಿ ಮಾಡಬಹುದೇ ? ಕೂಡದೇ ? ಇದು ಮೊದಲನೆಯ ಪ್ರಶ್ನೆಯಾಗಿದೆ. ಪ್ರಶ್ನೆಗೆ ರಿತ್ತಿಯವರೇ ಪ್ರತ್ಯುತ್ತರವನ್ನು ಕೊಟ್ಟಿರುವರು. ಮೇಲ್ಕಂಡ 1. 2. 3 ಮೂರು ಸಿದ್ಧಾಂತಗಳಲ್ಲಿ 'ಅಮಾವಾಸ್ಯಾದಿನದಲ್ಲಿ ಹಬ್ಬವನ್ನು ಮಾಡಬೇಕು' ಎಂದು ರಿತ್ತಿಯವರೇ ಅಂಗೀಕರಿಸಿರುತ್ತಾರೆ. ನಾಲ್ಕನೇ ಸಿದ್ಧಾಂತದಲ್ಲಿ 'ಅಮಾವಾಸ್ಯಾದಿನದಲ್ಲಿ ಹಬ್ಬವನ್ನು ಮಾಡಿದರೂ ದೋಷವಿಲ್ಲ' ಎಂದು ಘೋಷಿಸಿದ್ದಾರೆ. ಆದ್ದರಿಂದ ಅಮಾವಾಸ್ಯಾದಿನದಲ್ಲಿ ಹಬ್ಬವನ್ನು ಮಾಡ ಬಹುದೆಂದೂ ಯಾವ ದೋಷವೂ ಇಲ್ಲವೆಂದೂ ಅವರೇ ಹೇಳಿರುವುದು ನನಗೆ ವರಪ್ರಸಾದವಾಗಿರುತ್ತದೆ. ಇದರಿಂದ ಅಮಾವಾಸ್ಯಾದಿನದಲ್ಲಿ ಹಬ್ಬವನ್ನು ಮಾಡಕೂಡದು ಎಂಬ ವಿಷಯದಲ್ಲಿ ಅವರು ಮಾಡಿರುವ ಎಲ್ಲಾ ಸಾಹಸವೂ ಅವರು ಸ್ವಪ್ರಯತ್ನದಿಂದ ಸಂಪಾದಿಸಿರುವ 'ವ್ಯಾಹತಿವಾರಿಧಿ' ಎಂಬ ಬಿರುದನ್ನು ಪುಷ್ಟೀಕರಿಸುತ್ತದೆ.

ನವರಾತ್ರಿನಿರ್ಣಯವನ್ನು ಯಾವ ಗ್ರಂಥದ ಆಧಾರದಿಂದ ಮಾಡಬೇಕು? ಇದು ಎರಡನೆಯ ಪ್ರಶ್ನೆಯಾಗಿದೆ. ಇದನ್ನು ಈಗ ವಿಮರ್ಶಿಸುವೆವು. ಧರ್ಮಶಾಸ್ತ್ರ ನಿಬಂಧಗ್ರಂಥಗಳಲ್ಲಿ ಪರಸ್ಪರ ವಿರೋಧವು ಇರುವುದು ಲೋಕಪ್ರಸಿದ್ಧವಾಗಿದೆ. ಧರ್ಮಸಿಂಧು ಮುಂತಾದ ನಿಬಂಧಗ್ರಂಥಗಳಲ್ಲಿ ಏಕಾದಶೀ ಶ್ರಾದ್ಧ, ಭಸ್ಮಧಾರಣ ರುದ್ರಾಕ್ಷಧಾರಣ ಮುಂತಾದ ಕಾರ್ಯಗಳು ಧರ್ಮವೆಂದು ಸಮರ್ಥಿಸಲ್ಪಟ್ಟಿವೆ. ಸ್ಮೃತಿಮುಕ್ತಾವಲಿ, ಸ್ಮೃತ್ಯರ್ಥಸಾಗರ, ಕೃಷ್ಣಾಮೃತಮಹಾರ್ಣವ ಮುಂತಾದ ಧರ್ಮಶಾಸ್ತ್ರಗ್ರಂಥಗಳಲ್ಲಿ ಏಕಾದಶೀಶ್ರಾದ್ಧ ರುದ್ರಾಕ್ಷಧಾರಣ ಭಸ್ಮಧಾರಣ ಮುಂತಾದವುಗಳು ನಿಷೇಧಿಸಲ್ಪಟ್ಟಿವೆ. ಹೀಗಿರುವಾಗ ಎಲ್ಲಾ ನಿಬಂಧಗ್ರಂಥಗಳಿಗೂ ಸಂಮತವಾಗುವಂತೆ ಒಬ್ಬನು ಅನುಷ್ಠಾನ ಮಾಡಲು ಯತ್ನಿಸುವುದು ಹುಚ್ಚುತನವಾಗಿರುತ್ತದೆ. ಹಾಗೆ ಯಾರೂ ಮಾಡಲೂ ಇಲ್ಲ. ಮಾಡಲು ಸಾಧ್ಯವೂ ಇಲ್ಲ. ಧರ್ಮಸಿಂಧುವಿನಂತೆ ಏಕಾದಶೀಶ್ರಾದ್ಧವನ್ನೂ ಸ್ಮೃತಿಮುಕ್ತಾವಲಿಯಂತೆ ಏಕಾದಶೀಶ್ರಾದ್ಧತ್ಯಾಗವನ್ನೂ ಶ್ರೀರಿತ್ತಿಯವರು ಮಾಡಿ ಎರಡುಧರ್ಮಶಾಸ್ತ್ರಗಳಿಗೆ ಅವಿರೋಧವಾಗಿ ನಡೆದುಕೊಳ್ಳುವರೇ?

ಆದ್ದರಿಂದ ಸರ್ವರೂ ಧರ್ಮಶಾಸ್ತ್ರಗ್ರಂಥಗಳ ಮಧ್ಯದಲ್ಲಿ ಯಾವುದೋ ಒಂದುಗ್ರಂಥವನ್ನು ಪ್ರಧಾನವಾಗಿಟ್ಟುಕೊಂಡು ಅಲ್ಲಿ ಹೇಳಿದಂತೆ ನಡೆಯಬೇಕು. ಹಾಗೆ ಮಾಡಿದ್ದರಿಂದ ಇತರ ಧರ್ಮಶಾಸ್ತ್ರಗ್ರಂಥಗಳನ್ನು ಸಂಪೂರ್ಣವಾಗಿ ತಿರಸ್ಕರಿಸ ಬೇಕಾಗಿಲ್ಲ. ತಾವು ಪ್ರಧಾನವಾಗಿ ಅಂಗೀಕರಿಸಿರುವ ಧರ್ಮಶಾಸ್ತ್ರಗ್ರಂಥದಲ್ಲಿ ಹೇಳದಿರುವ ಕೆಲವು ವಿಷಯಗಳು ಇತರ ಧರ್ಮಶಾಸ್ತ್ರಗ್ರಂಥಗಳಲ್ಲಿ ಹೇಳಿದ್ದರೆ ಅವುಗಳನ್ನು ತಾವು ಸ್ವೀಕರಿಸುವುದರಲ್ಲಿ ತಪ್ಪಿಲ್ಲ. ಆದರೆ ಆ ವಿಷಯಗಳು ತಾವು ಪ್ರಧಾನಪ್ರಮಾಣವಾಗಿ ಅಂಗೀಕರಿಸಿರುವ ಗ್ರಂಥದಲ್ಲಿ ಹೇಳಿರುವ ವಿಷಯಗಳಿಗೆ ವಿರುದ್ಧವಾಗಿರಬಾರದು. ಈ ಪದ್ಧತಿಯನ್ನು ಅನಾದಿಕಾಲದಿಂದ ಇಂದಿನ ವರೆಗಿನ ಎಲ್ಲರೂ ಅನುಸರಿಸಿಕೊಂಡು ಬಂದಿರುವರು. ಸ್ಮಾರ್ತರು ಧರ್ಮಸಿಂಧು ನಿರ್ಣಯಸಿಂಧು ಮುಂತಾದ ನಿಬಂಧಗ್ರಂಥಗಳನ್ನೂ ಉತ್ತರಾದಿಮಠದವರು ಸ್ಮೃತ್ಯರ್ಥಸಾಗರ ಗ್ರಂಥವನ್ನೂ ಪ್ರಧಾನಪ್ರಮಾಣವಾಗಿಟ್ಟುಕೊಂಡು ಆ ಗ್ರಂಥಗಳಲ್ಲಿ

ಹೇಳಿದಂತೆಯೇ ಅನುಷ್ಠಿಸುತ್ತಿರುವರು. ಆ ಗ್ರಂಥದಲ್ಲಿ ಹೇಳಿರುವುದಕ್ಕೆ ವಿರುದ್ಧವಾಗಿ ಯಾವ ಗ್ರಂಥದಲ್ಲಿ ಬರೆದಿದ್ದರೂ ಅದನ್ನು ಸ್ವೀಕರಿಸುವುದಿಲ್ಲ.

ಶ್ರೀರಾಘವೇಂದ್ರಮಠದವರೂ ಸಹ ಶ್ರೀರಾಘವೇಂದ್ರಗುರುಸಾರ್ವಭೌಮರ ವಿದ್ಯಾಶಿಷ್ಯರೂ ಶ್ರೀಗುರುಸಾರ್ವಭೌಮರ ಕಾಲದ ಮಠದ ಸಂಪ್ರದಾಯವನ್ನು ಚೆನ್ನಾಗಿ ಅರಿತವರೂ ಆಗಿರುವ ಶ್ರೀಕೃಷ್ಣಾಚಾರ್ಯರಿಂದ ರಚಿತವಾಗಿರುವ ಸ್ಮೃತಿಮುಕ್ತಾವಲಿಗ್ರಂಥವನ್ನು ಪರಮಪ್ರಮಾಣವೆಂದು ಅಂಗೀಕರಿಸಿರುವರು. ಅಲ್ಲಿ ಹೇಳಿರುವ ನಿರ್ಣಯವನ್ನು ಅಂಗೀಕರಿಸುತ್ತಿರುವರು. ಆ ಗ್ರಂಥಕ್ಕೆ ವಿರುದ್ಧವಾಗಿ ಯಾವ ಗ್ರಂಥದಲ್ಲಿ ಬರೆದಿದ್ದರೂ ಅಂಗೀಕರಿಸುವುದಿಲ್ಲ. ಇದು ಈಗ ಪಂಚಾಂಗದಲ್ಲಿ ಪ್ರಕಟಿಸುತ್ತಿರುವ ಧರ್ಮಶಾಸ್ತ್ರನಿರ್ಣಯದ ಮೂಲಾಧಾರವಾಗಿದೆ.

ಶ್ರೀರಿತ್ತಿಯವರು ಮಂತ್ರಾಲಯದಲ್ಲಿ ನನ್ನೊಡನೆ ಶಾಸ್ತ್ರಾರ್ಥವಿಚಾರವನ್ನು ಆರಂಭಿಸುವಾಗ (1) ಸ್ಮೃತಿಮುಕ್ತಾವಲಿಗ್ರಂಥವು ಪ್ರಮಾಣ (2) ಅಲ್ಲಿ ಉದಾಹರಿಸಿರುವ ವಾಕ್ಯಗಳೆಲ್ಲವೂ ಪ್ರಮಾಣ (3) ಅವುಗಳಿಗೆ ಗ್ರಂಥಕಾರರು ಮಾಡಿರುವ ವ್ಯಾಖ್ಯಾನವು ಪ್ರಮಾಣ (4) ಸ್ಮೃತಿಮುಕ್ತಾವಲೀಗ್ರಂಥಕ್ಕೂ ಇತರ ಗ್ರಂಥಗಳಿಗೂ ವಿರೋಧವು ಬಂದಾಗ ಸ್ಮೃತಿಮುಕ್ತಾವಲೀಗ್ರಂಥವೇ ಗ್ರಾಹ್ಯ ಎಂದು ನಾಲ್ಕು ನಿಬಂಧನೆಗಳನ್ನು ಬರೆದು ಹಸ್ತಾಂಕನವನ್ನು ಮಾಡಿರುವರು. ಈಗ ಧರ್ಮಸಿಂಧು ನಿರ್ಣಯಸಿಂಧು ಮುಂತಾದ ಗ್ರಂಥಗಳು ಪರಮಪವಿತ್ರಗಳೆಂದು ಹೇಳುತ್ತಾ ಆ ಗ್ರಂಥಗಳಲ್ಲಿ ತಮ್ಮ ಪರಮಭಕ್ತಿಯನ್ನು ತೋರಿಸುತ್ತಾ ಅವುಗಳಿಗೆ ವಿರುದ್ಧವಾಗಿ ಸ್ಮೃತಿಮುಕ್ತಾವಲೀಗ್ರಂಥದಲ್ಲಿ ಮಾಡಿರುವ ನಿರ್ಣಯವನ್ನು ಧಿಕ್ಕರಿಸುತ್ತಿರುವರು. ಇದು ಅವರು ಸಂಪಾದಿಸಿರುವ 'ವ್ಯಾಹತಿ ವಾರಿಧಿ' ಎಂಬ ಬಿರುದಿಗೆ ಇನ್ನೂ ಉಚ್ಚಸ್ಥಾನವನ್ನು ಸಲ್ಲಿಸುತ್ತಿರುವುದು.

ಪರಮಪವಿತ್ರವೆಂದು ಅವರು ಪೂಜಿಸುತ್ತಿರುವ 'ಧರ್ಮಸಿಂಧು' ಮುಂತಾದ ಧರ್ಮಶಾಸ್ತ್ರಗಳಲ್ಲಿ ಹೇಳಿದಂತೆ ಏಕಾದಶೀಶ್ರಾದ್ಧ ರುದ್ರಾಕ್ಷಧಾರಣ ಭಸ್ಮಧಾರಣ ಮುಂತಾದವುಗಳನ್ನು ಮಾಡುವುದು ಅವರಿಗೆ ಪರಮಧರ್ಮವಾಗಿದೆ. ಅದನ್ನು ಮಾಡುತ್ತಿರುವರೇ? ಮಾಡದಿದ್ದರೆ ತಾವು ಮನ್ನಿಸಿ

ಯನ್ನು ಕೊಡುತ್ತಿರುವ ಗ್ರಂಥಗಳನ್ನು ತಿರಸ್ಕರಿಸಿದ ಇವರ ಸ್ಥಾನವು ಎಷ್ಟರ ಮಟ್ಟಿನದು ಎಂಬ ವಿಷಯವನ್ನು ವಾಚಕರೇ ತೀರ್ಮಾನಿಸಲಿ.

ಇವರು ಸ್ಮೃತಿಮುಕ್ತಾವಲೀಗ್ರಂಥವನ್ನು ಪ್ರಮಾಣವೆಂದು ಹೇಳುತ್ತಾ ಅದನ್ನು ದಡ್ಡತನದಿಂದ ಖಂಡಿಸುತ್ತಿರುವರು. ಸಮರ್ಥನಾದವನು ತಪ್ಪನ್ನು ಮಾಡಿದರೂ ಸಾಮರ್ಥ್ಯದಿಂದ ಇನ್ನೊಬ್ಬರಿಗೆ ತಿಳಿಯದಂತೆ ಮಾಡುವನು. ಇವರಿಗೆ ಆ ಸಾಮರ್ಥ್ಯವೂ ಇಲ್ಲ ಎಂಬ ಅಂಶವನ್ನು ಈಗ ಸ್ಪಷ್ಟಪಡಿಸುವೆನು. ಇವರಿಗೆ ಧರ್ಮಶಾಸ್ತ್ರಗಳಲ್ಲಿ ಉದಾಹರಿಸಿರುವ ಪ್ರಮಾಣವಾಕ್ಯಗಳ ಅರ್ಥವನ್ನು ಸ್ವತಃ ತಿಳಿಯುವ ಶಕ್ತಿಯಿಲ್ಲ. ಆ ಪ್ರಮಾಣವಾಕ್ಯಗಳಿಗೆ ಸ್ಮೃತಿಮುಕ್ತಾವಲೀಕಾರರು ಹೇಳಿರುವ ಅರ್ಥವನ್ನಾದರೂ ಸರಿಯಾಗಿ ತಿಳಿಯುವರೇ? ಅದೂ ಇಲ್ಲ. ಅಲ್ಲಿಯೂ ಅಪವ್ಯಾಖ್ಯಾನವನ್ನು ಮಾಡಿಕೊಂಡು ಜನರಿಗೆ ಭ್ರಾಂತಿಯನ್ನು ಹುಟ್ಟಿಸುತ್ತಿರುವರು. 1972 ನೇ ವರ್ಷದ ಆಗಸ್ಟ್ ಮತ್ತು ಸಪ್ಟಂಬರ ತಿಂಗಳುಗಳ ಶ್ರೀಗುರುಸಾರ್ವಭೌಮಪತ್ರಿಕೆಯ ಸಂಯುಕ್ತ ಸಂಚಿಕೆಯಲ್ಲಿ 70 ನೇ ಪುಟದಿಂದ 76 ನೇ ಪುಟದ ವರೆಗೆ ಸ್ಮೃತಿಮುಕ್ತಾವಲೀಗ್ರಂಥದ ಆಧಾರದಿಂದ ಬರೆದಿರುವ ನಿರ್ಣಯವನ್ನು ಓದಿದರೆ ನನ್ನ ಲೇಖನದಲ್ಲಿರುವ ಗುಣದೋಷಗಳು ವಾಚಕರಿಗೆ ಚೆನ್ನಾಗಿ ತಿಳಿಯುತ್ತವೆ. ಸ್ಮೃತಿಮುಕ್ತಾವಲಿಯಲ್ಲಿ ಹೇಳಿರುವ ವಿಷಯವನ್ನು ಗ್ರಹಣ ಮಾಡುವಷ್ಟು ಅರ್ಹತೆಯಿಲ್ಲದೆ ಅದನ್ನು ಖಂಡಿಸುವುದಕ್ಕಾಗಿ ಯತ್ನಿಸಿರುವರು. ಇದು ಅವರು ಸಂಪಾದಿಸಿರುವ ಧರ್ಮಶಾಸ್ತ್ರಜ್ಞಾನದ ಎಲ್ಲೆಯನ್ನು ಮುಟ್ಟುತ್ತಿದೆ.

ಈಗ ವಾಚಕರಿಗಾಗಿ ಸ್ಮೃತಿಮುಕ್ತಾವಲೀಕಾರರು ತಾವು ಉದಾಹರಿಸಿರುವ ವಾಕ್ಯಗಳಿಗೆ ತಾವೇ ಮಾಡಿರುವ ವ್ಯಾಖ್ಯಾನವಾಕ್ಯಗಳನ್ನು ಉದಾಹರಿಸಿ ಅವರ ಭಾವವನ್ನು ವಾಚಕರ ಮುಂದಿಡುವೆನು. ಅದನ್ನು ನೋಡಿ ವಾಚಕರೇ ಸ್ಮೃತಿಮುಕ್ತಾವಲೀಕಾರರ ಭಾವವನ್ನು ತಿಳಿಯಲಿ.

## ಸಾಮಾನ್ಯವಾಗಿ ಎಲ್ಲಾ ತಿಥಿಗಳಲ್ಲಿರುವ ಭೇದಗಳು

(1) ತತ್ರ ಸಾಮಾನ್ಯತಸ್ತಿಥಿಸ್ತ್ರಿವಿಧಾ, ಖರ್ವಾ, ದರ್ಪಾ, ಹಿಂಸ್ರಾ ಚೇತಿ. ಖರ್ವಾ ಸಮತಿಥಿಃ, ದರ್ಪಾ ವೃದ್ಧಿಯುಕ್ತಾ, ಹಿಂಸ್ರಾ ಕ್ಷಯಯುಕ್ತಾ.

ಎಲ್ಲಾ ತಿಥಿಗಳೂ ಖರ್ವ ದರ್ಪ ಹಿಂಸ್ರ ಎಂದು ಮೂರುವಿಧವಾಗಿವೆ. ತಿಥಿಯು ಪಂಚಾಂಗದಲ್ಲಿ ಇಂದು ಇದ್ದಷ್ಟೇ ನಾಳೆಯೂ ಇದ್ದರೆ ಖರ್ವತಿಥಿಯೆನಿಸುತ್ತದೆ. ಇಂದು ಇದ್ದದ್ದಕ್ಕಿಂತ ನಾಳೆ ಅಧಿಕವಾಗಿದ್ದರೆ ದರ್ಪತಿಥಿಯೆನಿಸುತ್ತದೆ. ಇಂದು ಇದ್ದದ್ದಕ್ಕಿಂತ ನಾಳೆ ಕಡಿಮೆಯಾಗಿದ್ದರೆ ಹಿಂಸ್ರ ತಿಥಿಯೆನಿಸುತ್ತದೆ. ಉದಾ—ಪಾಡ್ಯ 6 ಗಳಿಗೆ, ಬಿದಿಗೆ 6 ಗಳಿಗೆ, ಎಂದು ಪಂಚಾಂಗದಲ್ಲಿ ಕಂಡಾಗ ಖರ್ವತಿಥಿಯೆಂದೂ, ಪಾಡ್ಯ 6 ಗಳಿಗೆ ಬಿದಿಗೆ 7 ಗಳಿಗೆ ಎಂದು ಇದ್ದಾಗ ದರ್ಪತಿಥಿ ಎಂದೂ ಪಾಡ್ಯ 6 ಗಳಿಗೆ ಬಿದಿಗೆ 5 ಗಳಿಗೆ ಎಂದು ಇದ್ದಾಗ ಹಿಂಸ್ರತಿಥಿ ಎಂದೂ ಹೇಳ ಬೇಕು.

(2) ತ್ರಿವಿಧಾಪಿ ತಿಥಿರ್ದ್ವಿವಿಧಾ ಸಂಪೂರ್ಣಾ ಖಂಡಾ ಚೇತಿ.

ಮೇಲ್ಕಂಡ ಮೂರುವಿಧವಾದ ತಿಥಿಗಳಲ್ಲಿ ಒಂದೊಂದು ತಿಥಿಯೂ ಸಂಪೂರ್ಣತಿಥಿ ಎಂದೂ ಖಂಡತಿಥಿ ಎಂದೂ ಎರಡು ವಿಧವಾಗಿದೆ.

## ಸಂಪೂರ್ಣತಿಥಿ ಮತ್ತು ಖಂಡತಿಥಿ

(3) ತತ್ರ ಸಂಪೂರ್ಣಾ ಸ್ಕಾಂದೇ ದರ್ಶಿತಾ,
'ಪ್ರತಿಪತ್ಪ್ರಭೃತಯಃ ಸರ್ವಾ ಉದಯಾದುದಯಾದ್ರವೇಃ।
ಸಂಪೂರ್ಣಾ ಇತಿ ವಿಖ್ಯಾತಾಃ, ಇತಿ.
ಯಾ ನೈವಂವಿಧಾ ಸಾ ಖಂಡಾ.

"ಈ ಎರಡು ವಿಧವಾದ ತಿಥಿಗಳಲ್ಲಿ ಇಂದಿನ ಸೂರ್ಯೋದಯಕಾಲದಲ್ಲಿ ಆರಂಭಿಸಿ ನಾಳಿನ ಸೂರ್ಯೋದಯಕಾಲದಲ್ಲಿ ಮುಗಿಯುವ ತಿಥಿಯು ಸಂಪೂರ್ಣತಿಥಿಯೆನಿಸುತ್ತದೆ. ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ. ಹೀಗೆ ಇಲ್ಲದಿರುವ ತಿಥಿಯು ಖಂಡತಿಥಿಯೆನಿಸುತ್ತದೆ. ಉದಾ—ಪಾಡ್ಯ 59 ಗಳಿಗೆ, ಬಿದಿಗೆ 60 ಗಳಿಗೆ, ತದಿಗೆ 60 ಗಳಿಗೆ, ಚೌತಿ 59 ಗಳಿಗೆ ಎಂದು ಪಂಚಾಂಗದಲ್ಲಿ ಬರೆದಿರುತ್ತದೆ. ಈ ಉದಾಹರಣದಲ್ಲಿ ಬಿದಿಗೆತಿಥಿಯು ಬಿದಿಗೆದಿನದಲ್ಲಿ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಆರಂಭಿಸಿ ತದಿಗೆದಿನದಲ್ಲಿ ಸೂರ್ಯೋದಕಾಲದಲ್ಲಿ ಮುಗಿಯುತ್ತದೆ. ಈ ಬಿದಿಗೆಗೆ ತಾನು ಸೂರ್ಯೋದಯಲ್ಲಿದ್ದ ದಿನ ಮತ್ತು ಪಾಡ್ಯದಿನ ಎಂಬ ಎರಡುದಿನಗಳ ಸಂಬಂಧವು ಏರ್ಪಟ್ಟಿರುವುದರಿಂದ ಈ ಬಿದಿಗೆಯು ಖಂಡತಿಥಿಯೆನಿಸುತ್ತದೆ. ತದಿಗೆ ತಿಥಿಯು ತದಿಗೆ ದಿನದಲ್ಲಿ

ಉದಯಕಾಲದಲ್ಲಿ ಆರಂಭಿಸಿ ಮರುದಿನದಲ್ಲಿ ಸೂರ್ಯೋದಯಕಾಲದಲ್ಲಿ ಮುಗಿಯುತ್ತದೆ. ಆದ್ದರಿಂದ ಈ ತದಿಗೆತಿಥಿಯು ಸಂಪೂರ್ಣತಿಥಿಯೆನಿಸುತ್ತದೆ.

## ನಿರ್ಣಯಾರ್ಹವಾದ ತಿಥಿಗಳು

**(4) ತತ್ರ ವಿಧಿನಿಷೇಧಯೋಃ ಸಂಪೂರ್ಣಾಯಾಂ ತಿಥೌ ಸಂದೇಹಾಭಾವಾತ್ ಖಂಡತಿಥೌ ವಿಧಿನಿಷೇಧಃ ಕ್ರಿಯತೇ.**

"ಮೇಲ್ಕಂಡ ಸಂಪೂರ್ಣತಿಥಿಯು ಇಂದಿನ ಸೂರ್ಯೋದಯಕಾಲದಲ್ಲಿ ಆರಂಭಿಸಿ ನಾಳೆ ಸೂರ್ಯೋದಯದ ವರೆಗೆ ಇರುವುದರಿಂದ ಒಂದೇ ದಿನದಲ್ಲಿ ದ್ದಂತಾಯಿತು. ಆದ್ದರಿಂದ ಆ ತಿಥಿಯಲ್ಲಿ ಮಾಡಬೇಕಾದ ಮತ್ತು ಬಿಡಬೇಕಾದ ಕರ್ಮಗಳಿಗೆ ಸಂಬಂಧಿಸಿದ ದಿನವು ಇಂದೇ? ಅಥವಾ ನಾಳೆಯೇ ಎಂಬ ಸಂಶಯವು ಯಾರಿಗೂ ಬರುವುದಿಲ್ಲ. ಆದ್ದರಿಂದ ಸಂಪೂರ್ಣತಿಥಿಯಲ್ಲಿ ನಿರ್ಣಯದ ಆವಶ್ಯಕತೆಯಿಲ್ಲ. ಖಂಡತಿಥಿಯಲ್ಲಿ ತಿಥಿಯ ಒಂದು ಭಾಗವು ಮೊದಲನೆಯ ದಿನದಲ್ಲಿಯೂ ಇನ್ನೊಂದು ಭಾಗವು ಎರಡನೆಯ ದಿನದಲ್ಲಿಯೂ ಇರುವುದರಿಂದ ಆ ಎರಡು ಭಾಗಗಳಲ್ಲಿ ಆ ತಿಥಿಯಲ್ಲಿ ಮಾಡಬೇಕಾದ ಮತ್ತು ಬಿಡಬೇಕಾದ ಕರ್ಮಗಳಿಗೆ ಸಂಬಂಧಿಸಿದ ತಿಥಿಯ ಭಾಗವು ಹಿಂದಿನದೇ? ಅಥವಾ ಮುಂದಿನದೇ? ಎಂಬ ಸಂಶಯವು ಬರುತ್ತದೆ. ಈ ಖಂಡತಿಥಿಯಲ್ಲಿ ನಿರ್ಣಯದ ಆವಶ್ಯಕತೆಯಿದೆ. ಆದ್ದರಿಂದ ಎಲ್ಲಾ ಧರ್ಮಶಾಸ್ತ್ರಗಳೂ ಖಂಡತಿಥಿಯ ನಿರ್ಣಯಕ್ಕಾಗಿ ಹೊರಟಿವೆ."

ರಿತ್ತಿಯವರು **ನವರಾತ್ರಿನಿರ್ಣಯದ ಬಗ್ಗೆ ಆಗ್ರಹವೇ** ಎಂಬ ಪುಸ್ತಕದಲ್ಲಿ "ಮರುದಿನದಲ್ಲಿ ಸ್ವಲ್ಪವೂ ಪಾಡ್ಯ ಸಿಗದಿದ್ದರೆ ಪೂರ್ವದಿನದಲ್ಲಿ ಹಬ್ಬ ಮಾಡಿದರೆ ಯಾವ ದೋಷವೂ ಇಲ್ಲ" ಎಂದು ಹೇಳಿರುವರು.

ಹಿಂದಿನ ದಿನದಲ್ಲಿ ಸೂರ್ಯೋದಯವಾದ ಮೇಲೆ ಆರಂಭಿಸಿದ ಪಾಡ್ಯವು ಮರುದಿನ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಮುಗಿದಾಗ ಅಮಾವಾಸ್ಯಾ ದಿನದಲ್ಲಿಯೇ ಹಬ್ಬವನ್ನು ಅನುಷ್ಠಿಸಬೇಕೆಂದೂ ಹಾಗೆ ಅನುಷ್ಠಿಸಿದರೆ ದೋಷವಿಲ್ಲವೆಂದೂ ಸ್ಮೃತಿಮುಕ್ತಾವಲೀಕಾರರು ಪ್ರಮಾಣಗಳಿಂದ ಸಮರ್ಥಿಸಿರುವುದಾಗಿ ಮೇಲ್ಕಂಡ ವಾಕ್ಯದಿಂದ ರಿತ್ತಿಯವರು ತಿಳಿಸಿರುವರು.

ಹಿಂದಿನ ದಿನದಲ್ಲಿ ಸೂರ್ಯೋದಯಾನಂತರದಲ್ಲಿ ಆರಂಭಿಸಿದ ಪಾಡ್ಯವು ಮರುದಿನದಲ್ಲಿ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಮುಗಿದರೆ ಪಾಡ್ಯತಿಥಿಯು ಸಂಪೂರ್ಣತಿಥಿಯಂತೆ ಒಂದೇ ದಿನದಲ್ಲಿದ್ದಂತಾಯಿತು. ಆದ್ದರಿಂದ ಆ ಪಾಡ್ಯ ತಿಥಿಯಲ್ಲಿ ಮಾಡಬೇಕಾದ ಕಾರ್ಯವನ್ನು ಎಂದು ಮಾಡಬೇಕು? ಎಂಬ ಸಂಶಯವು ಯಾರಿಗೂ ಬರುವುದಿಲ್ಲ. ಆದ್ದರಿಂದಲೇ ಈ ಸಂದರ್ಭದಲ್ಲಿ ನಿರ್ಣಯದ ಆವಶ್ಯಕತೆ ಇಲ್ಲದಿರುವುದರಿಂದ ಯಾವ ಧರ್ಮಶಾಸ್ತ್ರವಾಕ್ಯವೂ ಈ ವಿಧವಾದ ಪಾಡ್ಯತಿಥಿಯನ್ನು ನಿರ್ಣಯಿಸಲಿಕ್ಕಾಗಿ ಹೊರಟಿಲ್ಲ. ಎಂದು ಮೇಲ್ಕಂಡ ಸ್ಮೃತಿಮುಕ್ತಾವಲೀಕಾರರ ಮಾತಿನಿಂದ ಸ್ಪಷ್ಟವಾಗುತ್ತದೆ.

ಹೀಗೆ ಇಂತಹ ಸಂದರ್ಭದಲ್ಲಿ ನಿರ್ಣಯವೇ ಅವಶ್ಯವಿಲ್ಲ ಎಂದು ಸ್ಮೃತಿಮುಕ್ತಾವಲೀಕಾರರು ಹೇಳುತ್ತಿದ್ದಾರೆ. ರಿತ್ತಿಯವರು ಇಂತಹ ಸಂದರ್ಭದಲ್ಲಿಯೇ ಸ್ಮೃತಿಮುಕ್ತಾವಲೀಕಾರರು ಪ್ರಮಾಣಗಳಿಂದ ನಿರ್ಣಯಿಸಿರುವುದಾಗಿ ಹೇಳುತ್ತಿದ್ದಾರೆ. ಇವರಲ್ಲವೇ ಸ್ಮೃತಿಮುಕ್ತಾವಲೀಕಾರರ ಭಾವವನ್ನು ತಿಳಿದಿರುವ ಬೃಹಸ್ಪತಿಯು? ಇರಲಿ. ಮುಂದುವರಿಯೋಣ.

## ಶುಕ್ಲಪಕ್ಷತಿಥಿಗಳ ನಿರ್ಣಯದ ಪ್ರತಿಜ್ಞೆ

(5) ತತ್ರ ಪ್ರತಿಪದಾದಿಪೂರ್ಣಿಮಾಂತಾಃ ಖಂಡತಿಥಯೋ ನಿರ್ಣೀಯಂತೇ.

"ಸಂಪೂರ್ಣ ಖಂಡ ಎಂಬ ಎರಡು ವಿಧವಾದ ಖರ್ವ ದರ್ಪ ಹಿಂಸ್ರ ಎಂಬ ತಿಥಿಗಳಲ್ಲಿ ಪಾಡ್ಯದಿಂದ ಆರಂಭಿಸಿ ಹುಣ್ಣಿಮೆ ವರೆಗಿನ ಖಂಡತಿಥಿಗಳನ್ನು ನಿರ್ಣಯಿಸುವೆವು."

## ಶುಕ್ಲಪಕ್ಷತಿಥಿಗಳಲ್ಲಿ ಸಂಶಯ

(6) ತತ್ರ ಕಿಂ ದರ್ಶಾದಿಯುಕ್ತಾಯಾಂ ಪ್ರತಿಪದಾದೌ ಪ್ರತಿಪದಾದಿಪ್ರಯುಕ್ತೋಪವಾಸಾದಿಕಂ ಸರ್ವಮನುಷ್ಠೇಯಂ ಉತ ದ್ವಿತೀಯಾದಿಯುಕ್ತಪ್ರತಿಪದಾದಾವಿತಿ ಸಂದೇಹೇ ನಿರ್ಣಯಃ ಕ್ರಿಯತೇ.

"ಶುಕ್ಲಪಕ್ಷದ ಪಾಡ್ಯ ಮುಂತಾದ ತಿಥಿಗಳು ಖಂಡತಿಥಿಗಳಾಗಿರುವಾಗ ಪಾಡ್ಯ ಮುಂತಾದ ತಿಥಿಗಳಲ್ಲಿ ಮಾಡ ಬೇಕಾದ ವ್ರತ ಉಪವಾಸ ಮುಂತಾದ ಎಲ್ಲಾ ಕಾರ್ಯಗಳನ್ನೂ ಆ ತಿಥಿಗಳ ಹಿಂದಿನ ಭಾಗದಿಂದ ಯುಕ್ತವಾಗಿರುವ ಅಮಾವಾಸ್ಯಾ ಮುಂತಾದ ದಿನಗಳಲ್ಲಿ ಮಾಡಬೇಕೇ? ಮುಂದಿನ ಭಾಗ ದಿಂದ ಯುಕ್ತವಾಗಿರುವ ಬಿದಿಗೆ ಮುಂತಾದ ದಿನಗಳಲ್ಲಿ ಮಾಡಬೇಕೇ? ಎಂಬ ಸಂಶಯವು ಬರುತ್ತದೆ. ಈ ಸಂಶಯವನ್ನು ಪರಿಹರಿಸುವುದಕ್ಕಾಗಿ ನಿರ್ಣಯವು ಈಗ ನನ್ನಿಂದ ಬರೆಯಲ್ಪಡುತ್ತಿದೆ."

ಈ ವಾಕ್ಯದಲ್ಲಿ ಪಾಡ್ಯ ಮುಂತಾದ ತಿಥಿಗಳಿಗೆ ಹಿಂದಿನ ಮತ್ತು ಮುಂದಿನ ತಿಥಿಗಳ ಸಂಬಂಧವು ಏರ್ಪಟ್ಟಿರುವಾಗ ನಿರ್ಣಯವನ್ನು ಬರೆಯುವು ದಾಗಿ ಸಂಶಯಕ್ಕೆ ಅವಕಾಶವಿಲ್ಲದಂತೆ ಅತಿಸ್ಪಷ್ಟವಾಗಿ ಗ್ರಂಥಕಾರರು ಹೇಳಿರುವರು.

ಮರುದಿನದಲ್ಲಿ ಸೂರ್ಯೋದಯಾನಂತರದಲ್ಲಿ ಪಾಡ್ಯವು ಸ್ವಲ್ಪವೂ ಇಲ್ಲದಿರುವಾಗ ಅಂದರೆ ಪಾಡ್ಯತಿಥಿಗೆ ಬಿದಿಗೆಯ ಸಂಬಂಧವೇ ಇಲ್ಲದೆ ಬರೀ ಅಮಾವಾಸ್ಯೆಯ ಸಂಬಂಧ ಇರುವಾಗ ಪಾಡ್ಯದಲ್ಲಿ ಮಾಡ ಬೇಕಾದ ಹಬ್ಬ ವನ್ನು ಅಮಾವಾಸ್ಯಾದಿನದಲ್ಲಿಯೇ ಮಾಡ ಬೇಕೆಂದು ಸ್ಮೃತಿಮುಕ್ತಾವಲೀ ಕಾರರು ನಿರ್ಣಯಿಸಿರುವುದಾಗಿ ರಿತ್ತಿಯವರು ಹೇಳುತ್ತಿದ್ದಾರೆ. ಗ್ರಂಥ ಕಾರರ ಅತಿಸ್ಪಷ್ಟವಾದ ಅಭಿಪ್ರಾಯಕ್ಕೆ ವಿರುದ್ಧವಾಗಿ ಗ್ರಂಥಕಾರರ ವಚನ ಗಳಿಗೆ ಅರ್ಥವನ್ನು ಕಲ್ಪಿಸುತ್ತಿರುವ ಈ ರಿತ್ತಿ ಆಚಾರ್ಯರು ತಾನೇ ವ್ಯಾಹತಿ ವಾರಿಧಿ ಎಂಬ ಅಂಶವನ್ನು ಊರ್ಜಿತ ಪಡಿಸುತ್ತಿರುವುದು ಗಮನಾರ್ಹ.

ಈ ವಾಕ್ಯದಲ್ಲಿ ವ್ರತೋಪವಾಸಾದಿಕಂ ಸರ್ವಂ ಅಂದರೆ 'ವ್ರತ ಉಪವಾಸ ಮುಂತಾದ ಎಲ್ಲಾ ಕಾರ್ಯಗಳನ್ನೂ ಹಿಂದಿನ ದಿನದಲ್ಲಿಯೇ ಮಾಡಬೇಕೇ? ಮುಂದಿನ ದಿನದಲ್ಲಿಯೇ ಮಾಡಬೇಕೇ? ಎಂಬ ವಿಷಯ ವನ್ನು ನಿರ್ಣಯಿಸುವೆವು.' ಎಂದು ಪ್ರತಿಜ್ಞೆಯನ್ನು ಮಾಡಿರುವರು. ಬರೀ ಉಪವಾಸವನ್ನು ಎಂದು ಮಾಡಬೇಕು? ಎಂದು ನಿರ್ಣಯಿಸುವುದಾಗಿ ಪ್ರತಿಜ್ಞೆ ಮಾಡಿಲ್ಲ. ಇಲ್ಲದಿರುವ 'ಆದಿ' 'ಸರ್ವಂ' ಎಂಬ ಎರಡು ಪದಗಳು ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ. ಆದ್ದರಿಂದ ಮುಂದಿನ ವಾಕ್ಯಗಳಿಂದ

ಅವರು ಮಾಡುವ ಎಲ್ಲಾ ನಿರ್ಣಯಗಳೂ ವ್ರತ ಉಪವಾಸ ಹಬ್ಬ ಮುಂತಾದ ಎಲ್ಲಾ ಕಾರ್ಯಗಳಿಗೂ ಸಂಬಂಧಪಟ್ಟಿರುತ್ತವೆ ಎಂದು ಗ್ರಂಥಕಾರರು ಹೇಳಿರುವರು. ಈ ಅಂಶವು ಗಮನಾರ್ಹ.

## ಯುಗ್ಮವಾಕ್ಯದಿಂದ ಶುಕ್ಲಪಾಡ್ಯದಲ್ಲಿ ನಿರ್ಣಯ

(7) ತತ್ರಾಮಾವಾಸ್ಯಾಯುಕ್ತಪ್ರತಿಪದ್ಯೇವ ವ್ರತೋಪವಾಸಾದಿಕಂ ಕಾರ್ಯಂ. ಯುಗ್ಮವಾಕ್ಯಾತ್.

"ಪಾಡ್ಯದಿಂದ ಆರಂಭಿಸಿ ಶುಕ್ಲಪಕ್ಷದ ಎಲ್ಲಾ ತಿಥಿಗಳಲ್ಲಿಯೂ ನಿರ್ಣಯವನ್ನು ತಿಳಿಸುವುದಾಗಿ ಪ್ರತಿಜ್ಞೆ ಮಾಡಿದೆವು. ಆ ಎಲ್ಲಾ ತಿಥಿಗಳ ಮಧ್ಯದಲ್ಲಿ ಶುಕ್ಲಪಾಡ್ಯವು ಅಮಾವಾಸ್ಯಾತಿಥಿಯಿಂದ ಯುಕ್ತವಾಗಿರುವ ಹಿಂದಿನ ದಿನದಲ್ಲಿಯೇ ಪಾಡ್ಯದಲ್ಲಿ ಮಾಡ ಬೇಕಾದ ವ್ರತ ಉಪವಾಸ ಮುಂತಾದ ಎಲ್ಲಾ ಕಾರ್ಯಗಳನ್ನೂ ಮಾಡಬೇಕು. ಬಿದಿಗೆಯಿಂದ ಯುಕ್ತವಾದ ಮರುದಿನದಲ್ಲಿ ಮಾಡಕೂಡದು. ಈ ವಿಷಯದಲ್ಲಿ ಯುಗ್ಮವಾಕ್ಯವು ಆಧಾರವಾಗಿದೆ."

ಈ ವಾಕ್ಯದಲ್ಲಿ 'ವ್ರತೋಪವಾಸಾದಿಕಂ' ಎಂಬ ಪದದಲ್ಲಿರುವ 'ಆದಿ' ಎಂಬ ಪದದಿಂದ ಹಿಂದಿನ ವಾಕ್ಯದಲ್ಲಿ ಹೇಳಿದಂತೆ ಪಾಡ್ಯದಲ್ಲಿ ಮಾಡಬೇಕಾದ ಹಬ್ಬ ಮುಂತಾದ ಎಲ್ಲಾ ಕಾರ್ಯಗಳನ್ನು ಅಮಾವಾಸ್ಯಾಯುಕ್ತವಾದ ಹಿಂದಿನ ದಿನದಲ್ಲಿಯೇ ಮಾಡಬೇಕೆಂದು ಅತಿಸ್ಪಷ್ಟವಾಗಿ ನಿರ್ಣಯಿಸಿರುವುದು ಗಮನಾರ್ಹ. ಇದು ಸ್ಮೃತಿಮುಕ್ತಾವಲೀಕಾರರು ಹೇಳಿರುವುದು.

**ನವರಾತ್ರಿ ನಿರ್ಣಯದ ಬಗ್ಗೆ ಆಗ್ರಹವೇ?** (ಪುಟ 6)— "ಸಾಮಾನ್ಯ ಪ್ರತಿಪತ್ತಿನ ನಿರ್ಣಯವು ಉಪವಾಸಕ್ಕೆ ಸಂಬಂಧಪಟ್ಟುದೆಂದು ಗ್ರಂಥಕಾರರು ಸೂಚಿಸಿದ್ದಾರೆ" ಎಂದು ರಿತ್ತಿಯವರು ಹೇಳುತ್ತಾ ಸ್ಮೃತಿಮುಕ್ತಾವಲೀಕಾರರ ಸ್ಪಷ್ಟವಚನಕ್ಕೆ ವಿರುದ್ಧವಾಗಿ ಅವರ ಅಭಿಪ್ರಾಯವನ್ನು ಕಲ್ಪಿಸುತ್ತಿರುವುದು ಗಮನಾರ್ಹ.

ಸ್ಮೃತಿಮುಕ್ತಾವಲೀಕಾರರ ವಾಕ್ಯದಲ್ಲಿ ವ್ರತೋಪವಾಸಾದಿಕಂ ಎಂಬಲ್ಲಿ ವ್ರತ ಆದಿ ಎಂಬ ಎರಡು ಪದಗಳಿವೆ. ಈ ಪದಗಳು ರಿತ್ತಿಯವರ

ಹೇಳಿಕೆಯಂತೆ ಉಪವಾಸಕ್ಕೆ ಮಾತ್ರ ನಿರ್ಣಯವನ್ನು ಸ್ಮೃತಿಮುಕ್ತಾವಲೀ ಕಾರರು ಬರೆದಿದ್ದರೆ ವ್ಯರ್ಥವಾಗುತ್ತವೆ. ಇದನ್ನು ರಿತ್ತಿಯವರು ಗಮನಿಸದಿರುವುದು ಗಮನಾರ್ಹ.

(8) ಯುಗ್ಮಾಗ್ನಿಯುಗಭೂತಾನಾಂ ಷಣ್ಮುನ್ಯೋರ್ವಸುರಂಧ್ರಯೋಃ ।
ರುದ್ರೇಣ ದ್ವಾದಶೀ ಯುಕ್ತಾ ಚತುರ್ದಶ್ಯಾ ಚ ಪೂರ್ಣಿಮಾ ॥
ಪ್ರತಿಪದ್ಯಪ್ಯಮಾವಾಸ್ಯಾ ತಿಥ್ಯೋರ್ಯುಗ್ಮಂ ಮಹಾಫಲಂ ।
ಏತದ್ವ್ಯಸ್ತಂ ಮಹಾದೋಷಂ ಹಂತಿ ಪುಣ್ಯಂ ಪುರಾತನಂ ॥ (ನಿಗಮ)

(ಯುಗ್ಮ=ಬಿದಿಗೆ, ಅಗ್ನಿ=ತದಿಗೆ, ಯುಗ=ಚತುರ್ಥೀ, ಭೂತ=ಪಂಚಮಿ, ಷಟ್=ಷಷ್ಠೀ, ಮುನಿ=ಸಪ್ತಮಿ, ವಸು=ಅಷ್ಟಮಿ, ರಂಧ್ರ=ನವಮಿ, ರುದ್ರ=ಏಕಾದಶೀ, ಪ್ರತಿಪದೀ=ಪಾಡ್ಯ)

ಬಿದಿಗೆ ಮತ್ತು ತದಿಗೆ, ಚೌತಿ ಮತ್ತು ಪಂಚಮಿ, ಷಷ್ಠೀ ಮತ್ತು ಸಪ್ತಮಿ, ಅಷ್ಟಮಿ ಮತ್ತು ನವಮಿ, ಏಕಾದಶೀ ಮತ್ತು ದ್ವಾದಶೀ, ಚತುರ್ದಶೀ ಮತ್ತು ಹುಣ್ಣಿಮೆ, ಅಮಾವಾಸ್ಯೆ ಮತ್ತು ಪಾಡ್ಯತಿಥಿ ಹೀಗೆ ಏಳು ತಿಥಿಗಳ ಜೋಡಿಗಳು. ಈ ಜೋಡಿಗಳಲ್ಲಿರುವ ತಿಥಿಗಳಿಗೆ ಅನ್ಯೋನ್ಯ ಸಂಬಂಧವು ಅಂದರೆ ಬಿದಿಗೆಗೆ ತದಿಗೆಯ ಸಂಬಂಧ, ತದಿಗೆಗೆ ಬಿದಿಗೆಯ ಸಂಬಂಧ, ಅಮಾವಾಸ್ಯೆಗೆ ಮರುದಿನವಾದ ಶುಕ್ಲಪಾಡ್ಯತಿಥಿಯ ಸಂಬಂಧ, ಶುಕ್ಲಪಾಡ್ಯತಿಥಿಗೆ ಅಮಾವಾಸ್ಯೆಯ ಸಂಬಂಧ ಮುಂತಾದ ಏಳು ಸಂಬಂಧಗಳು ಶುಭಫಲವನ್ನು ಕೊಡುತ್ತವೆ. ಇದಕ್ಕೆ ವಿಪರೀತವಾಗಿದ್ದರೆ ಅಂದರೆ ಶುಕ್ಲಪಾಡ್ಯತಿಥಿಗೆ ಬಿದಿಗೆಯ ಸಂಬಂಧ, ಬಿದಿಗೆಗೆ ಶುಕ್ಲಪಾಡ್ಯದ ಸಂಬಂಧ ಮುಂತಾದ ಏಳು ಸಂಬಂಧಗಳು ಹಿಂದೆ ಮಾಡಿದ ಪುಣ್ಯಗಳನ್ನೆಲ್ಲವನ್ನೂ ನಾಶ ಮಾಡುತ್ತವೆ. ಮಹಾದೋಷಕರವಾಗಿವೆ.

(ಇದು ಧರ್ಮಶಾಸ್ತ್ರದಲ್ಲಿ ಯುಗ್ಮವಾಕ್ಯವೆಂದು ಪ್ರಸಿದ್ಧವಾದುದು. ಈ ವಾಕ್ಯವನ್ನು ಎಲ್ಲಾ ಧರ್ಮಶಾಸ್ತ್ರಕಾರರೂ ಉದಾಹರಿಸಿದ್ದಾರೆ. ಮೇಲೆ ಬರೆದಿರುವ ಅರ್ಥವನ್ನೇ ಎಲ್ಲಾ ಧರ್ಮಶಾಸ್ತ್ರಕಾರರೂ ಹೇಳಿರುತ್ತಾರೆ.)

(9) ಅನೇನ ಯುಗ್ಮವಾಕ್ಯೇನ ಶುಕ್ಲಪಕ್ಷಪ್ರತಿಪದಃ ಪೂರ್ವವಿದ್ಧಾಯಾಃ ಪ್ರಶಸ್ತತ್ವಂ ಗಮ್ಯತೇ, 'ಪ್ರತಿಪದ್ಯಪ್ಯಮಾವಾಸ್ಯಾ' ಇತ್ಯುಕ್ತತ್ವಾತ್.

"ಮೇಲ್ಕಂಡ ಯುಗ್ಮವಾಕ್ಯದಲ್ಲಿ 'ಪ್ರತಿಪದ್ಯಮಾವಾಸ್ಯಾ' ಅಂದರೆ 'ಪಾಡ್ಯ ಮತ್ತು ಅಮಾವಾಸ್ಯೆ ಇವುಗಳ ಜೋಡಿಯು ಶುಭಕರ' ಎಂದು ಹೇಳಿರುತ್ತದೆ. ಅಮಾವಾಸ್ಯೆಯ ಅನಂತರದಲ್ಲಿ ಬರುವ ಪಾಡ್ಯವು ಶುಕ್ಲ ಪಕ್ಷದ ಪಾಡ್ಯವೇ ಹೊರತು ಕೃಷ್ಣಪಕ್ಷದ ಪಾಡ್ಯವಲ್ಲ. ಆದ್ದರಿಂದ ಈ ಯುಗ್ಮ ವಾಕ್ಯದಿಂದ ಅಮಾವಾಸ್ಯೆಯಿಂದ ಯುಕ್ತವಾದ ಶುಕ್ಲಪಕ್ಷದ ಪಾಡ್ಯವು ಶುಭಕರ ಎಂದು ತಿಳಿಯುತ್ತದೆ."

## ಪ್ರಮಾಣಾಂತರದಿಂದ ಶುಕ್ಲಪಾಡ್ಯನಿರ್ಣಯ

(10) ಇತ್ಥಮಮಾವಾಸ್ಯಾಪ್ರತಿಪದ್ವಿಷಯೇ,
ಪಂಚಮೀ ಸಪ್ತಮೀ ಚೈವ ದಶಮೀ ಚ ತ್ರಯೋದಶೀ।
ಪ್ರತಿಪನ್ನವಮೀ ಚೈವ ಕರ್ತವ್ಯಾ ಸಂಮುಖಾ ತಿಥಿಃ ||
ಇತ್ಯೇವಮಾದೀನಿ ಪೈಠೀನಸ್ಯಾದಿವಚನಾನಿ ದೃಷ್ಟವ್ಯಾನಿ।
(ಸಂಮುಖಾ ನಾಮ ದರ್ಶಯುಕ್ತಾ ಪ್ರತಿಪದಿತ್ಯುಕ್ತಂ ಹೇಮಾದ್ರಿ. ಅಪರಾಹ್ಣವ್ಯಾಪಿನೀ ಸಾಯಾಹ್ನವ್ಯಾಪಿನೀ ವೇತ್ಯ ಪರೇ.)

"ಅಮಾವಾಸ್ಯಾಯುಕ್ತವಾದ ಪಾಡ್ಯವೇ ಗ್ರಾಹ್ಯ ಎಂಬ ವಿಷಯದಲ್ಲಿ ಪೈಠೀನಸಿವಚನವೂ ಸಹ ಆಧಾರವಾಗಿದೆ. 'ಪಂಚಮೀ ಸಪ್ತಮೀ ಚೈವ' ಎಂಬ ಪೈಠೀನಸಿಯ ವಾಕ್ಯದಲ್ಲಿ 'ಪ್ರತಿಪತ್' ಎಂದು ಹೇಳಿದೆ. ಈ ಪಾಡ್ಯವು ಶುಕ್ಲಪಕ್ಷದ ಪಾಡ್ಯವೇ ಹೊರತು ಕೃಷ್ಣಪಕ್ಷದ ಪಾಡ್ಯವಲ್ಲ ಎಂದು ಹೇಮಾದ್ರಿ ಎಂಬ ಧರ್ಮಶಾಸ್ತ್ರಕಾರರು 'ದರ್ಶಯುಕ್ತಾ ಪ್ರತಿಪತ್' ಅಂದರೆ ಅಮಾವಾಸ್ಯೆಯಿಂದ ಯುಕ್ತವಾದ ಪಾಡ್ಯ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಇನ್ನು ಕೆಲವು ಧರ್ಮಶಾಸ್ತ್ರಕಾರರು ಇದೇ ವಿಷಯವನ್ನೇ ಬೇರೆ ಬೇರೆ ವಿಧವಾಗಿ ಹೇಳಿರುತ್ತಾರೆ. ಆದ್ದರಿಂದ ಮೇಲ್ಕಂಡ ಪೈಠೀನಸಿ ವಾಕ್ಯದಲ್ಲಿ 'ಪ್ರತಿಪತ್' ಎಂದು ಸಾಧಾರಣವಾಗಿ ಹೇಳಿದ್ದರೂ ಹೇಮಾದ್ರಿ ಮುಂತಾದ ಅನೇಕ ಧರ್ಮಶಾಸ್ತ್ರಕಾರರ ವ್ಯಾಖ್ಯಾನದಿಂದ ಅಮಾವಾಸ್ಯಾ ಯುಕ್ತವಾದ ಶುಕ್ಲಪಕ್ಷದ ಪಾಡ್ಯವೇ ಅಲ್ಲಿರುವ 'ಪ್ರತಿಪತ್' ಎಂಬ ಪದದಿಂದ ಗ್ರಾಹ್ಯವೆಂದೂ ಅದೇ ಶುಭಕರವೆಂದೂ ಆ ವಾಕ್ಯವು ಹೇಳುವುದಾಗಿ ತಿಳಿಯ

ಬೇಕು. ಇತ್ಯೇವಮಾದೀನಿ ಅಂದರೆ ಈ ಪೈಠೀನಸಿವಾಕ್ಯದಂತೆ ಇನ್ನೂ ಅನೇಕ ಪ್ರಮಾಣಗಳು ಇವೆ. ಅವುಗಳನ್ನು ಅಲ್ಲಲ್ಲಿ ತಿಳಿದುಕೊಳ್ಳಿ."

"ಈ ವಾಕ್ಯದಲ್ಲಿ ಅಮಾವಾಸ್ಯಾಯುಕ್ತವಾದ ಪಾಡ್ಯದಲ್ಲಿ ಹಬ್ಬವನ್ನು ಮಾಡಬೇಕೆಂಬ ವಿಷಯದಲ್ಲಿ ಯುಗ್ಮವಾಕ್ಯವು ಮಾತ್ರವಲ್ಲ. ಪೈಠೀನಸಿ ಮುಂತಾದ ಅನೇಕಜ್ಞಾನಿಗಳ ವಾಕ್ಯಗಳೂ ಆಧಾರವಾಗಿವೆ. ಆದ್ದರಿಂದ ನಾನು ಮಾಡಿರುವ ಈ ನಿರ್ಣಯವು ಅನೇಕಪ್ರಮಾಣಗಳ ಆಧಾರದಿಂದ ಮಾಡಲ್ಪಟ್ಟಿದೆ. ನಿರಾಧಾರವಲ್ಲ" ಎಂದು ಗ್ರಂಥಕಾರರು ಸ್ಪಷ್ಟವಾಗಿ ಕಾರಣವನ್ನು ಹೇಳಿ ಸಮರ್ಥಿಸಿರುವರು.

ನವರಾತ್ರಿ ನಿರ್ಣಯದ ಬಗ್ಗೆ ಆಗ್ರಹವೇ? (ಪುಟ 12) "ಇತ್ತೀಚಿನ ಪಂಚಾಂಗಗಳಲ್ಲಿ ಅಮಾಯುಕ್ತವಾಗಿ ಹಬ್ಬಗಳನ್ನು ಬರೆಯುತ್ತಿರುವುದು ಸ್ಮೃತಿಮುಕ್ತಾವಳಿಗೆ ವಿರುದ್ಧವಾಗಿದೆ" ಎಂದು ಸ್ಮೃತಿಮುಕ್ತಾವಳೀಕಾರರ ಸ್ಪಷ್ಟವಚನಕ್ಕೆ ವಿರುದ್ಧವಾಗಿ ರತ್ತಿಯವರು ಬರೆದಿರುವುದು ಗಮನಾರ್ಹ.

## ಪಾಡ್ಯನಿರ್ಣಯದಲ್ಲಿ ವಿರೋಧ ಪರಿಹಾರ

(11) ಪ್ರತಿಪತ್ ಸದ್ವಿತೀಯಾ ಸ್ಯಾದ್ದ್ವಿತೀಯಾ ಪ್ರತಿಪದ್ಯುತಾ।
ಚತುರ್ಥ್ಯಾ ಸಂಯುತಾ ಯಾ ಚ ಸಾ ತೃತೀಯಾ ಫಲಪ್ರದಾ॥
ಇತಿ ಯದಾಪಸ್ತಂಬವಚನಂ ತತ್ ಕೃಷ್ಣಪಕ್ಷವಿಷಯಮಿತ್ಯವಗಂತವ್ಯಂ.

"ಬಿದಿಗೆಯಿಂದ ಯುಕ್ತವಾದ ಪಾಡ್ಯ ಮತ್ತು ಪಾಡ್ಯದಿಂದ ಯುಕ್ತವಾದ ಬಿದಿಗೆ ಇವೆರಡೂ ಶುಭಕರವಾಗುತ್ತವೆ ಎಂದು ಆಪಸ್ತಂಬರು ಹೇಳಿರುವರು. ಈ ವಾಕ್ಯದಿಂದ ಶುಕ್ಲಪಕ್ಷದ ಪಾಡ್ಯವು ಅಮಾವಾಸ್ಯೆಯಿಂದ ಯುಕ್ತವಾಗಿದ್ದರೆ ಶುಭಕರವಲ್ಲವೆಂದೂ ಬಿದಿಗೆಯಿಂದ ಯುಕ್ತವಾಗಿದ್ದರೆ ಶುಭಕರವೆಂದೂ ಸಿದ್ಧವಾಗುತ್ತದೆ. ಮೇಲ್ಕಂಡ ಯುಗ್ಮವಾಕ್ಯ ಮತ್ತು ಪೈಠೀನಸಿವಾಕ್ಯ ಮುಂತಾದ ವಾಕ್ಯಗಳಿಗೆ ಈ ಆಪಸ್ತಂಬರ ವಚನದ ವಿರೋಧವು ಬರುವುದಿಲ್ಲವೇ? ಎಂದು ಪ್ರಶ್ನಿಸ ಬಹುದು. ಆದರೆ ಈ ಆಪಸ್ತಂಬ ವಚನದಲ್ಲಿ 'ಪ್ರತಿಪತ್' ಎಂದು ಸಾಧಾರಣವಾಗಿ ಹೇಳಿರುತ್ತದೆ

ಇಲ್ಲಿರುವ 'ಪ್ರತಿಪತ್' ಎಂಬ ಪದಕ್ಕೆ ಶುಕ್ಲಪಕ್ಷದ ಪಾಡ್ಯ ಮತ್ತು ಕೃಷ್ಣ ಪಕ್ಷದ ಪಾಡ್ಯ ಎಂಬ ಎರಡು ಅರ್ಥವೂ ಆಗುತ್ತದೆ. ಎರಡು ಪಾಡ್ಯಗಳನ್ನೂ ತೆಗೆದುಕೊಂಡರೆ ಈ ವಾಕ್ಯದ ವಿರೋಧವು ಯುಗ್ಮವಾಕ್ಯಕ್ಕೂ ಪೈಠೀನಸಿ ಮುಂತಾದವರ ವಾಕ್ಯಗಳಿಗೂ ಬರುತ್ತದೆ. ಆದಕ್ಕಾಗಿ ಇಲ್ಲಿರುವ 'ಪ್ರತಿಪತ್' ಎಂಬ ಪದಕ್ಕೆ ಎರಡು ಪಾಡ್ಯಗಳ ಮಧ್ಯದಲ್ಲಿ ಶುಕ್ಲಪಕ್ಷದ ಪಾಡ್ಯವನ್ನು ಬಿಟ್ಟು ಕೃಷ್ಣಪಕ್ಷದ ಪಾಡ್ಯ ಎಂಬ ಅರ್ಥವನ್ನು ಸ್ವೀಕರಿಸ ಬೇಕು. ಹೀಗೆ ಮಾಡಿದರೆ ಯುಗ್ಮವಾಕ್ಯ ಮುಂತಾದ ವಾಕ್ಯಗಳು ಶುಕ್ಲಪಕ್ಷದ ಪಾಡ್ಯವು ಅಮಾವಾಸ್ಯಾಯುಕ್ತವಾಗಿದ್ದರೆ ಶುಭಕರವೆಂದೂ ಆಪಸ್ತಂಬವಚನವು ಕೃಷ್ಣಪಕ್ಷದ ಪಾಡ್ಯವು ಬಿದಿಗೆಯಿಂದ ಯುಕ್ತವಾಗಿದ್ದರೆ ಶುಭಕರವೆಂದೂ ಹೇಳುತ್ತವೆ. ಇದರಿಂದ ಎರಡು ವಾಕ್ಯಗಳಿಗೂ ವಿರೋಧವಿಲ್ಲದಂತಾಗುತ್ತದೆ" ಇದು ಸ್ಮೃತಿಮುಕ್ತಾವಲೀಕಾರರ ಹೇಳಿಕೆ.

ಆಪಸ್ತಂಬವಾಕ್ಯವು ಎರಡು ಪಕ್ಷಗಳ ಪಾಡ್ಯಗಳನ್ನೂ ಸಾಮಾನ್ಯವಾಗಿ ತಿಳಿಸುತ್ತಿರುವುದರಿಂದ ಸಾಮಾನ್ಯವಾಕ್ಯವೆನಿಸುತ್ತದೆ. ಯುಗ್ಮವಾಕ್ಯ ಮತ್ತು ಪೈಠೀನಸಿ ಮುಂತಾದವರ ವಚನಗಳು ಆ ಎರಡು ಪಾಡ್ಯಗಳ ಮಧ್ಯದಲ್ಲಿ ಒಂದಾಗಿರುವ ಶುಕ್ಲಪಕ್ಷದ ಪಾಡ್ಯವನ್ನು ಮಾತ್ರ ತಿಳಿಸುತ್ತಿರುವುದರಿಂದ ವಿಶೇಷವಾಕ್ಯವೆನಿಸುತ್ತವೆ. ಸಾಮಾನ್ಯ ವಿಶೇಷವಾಕ್ಯಗಳಿಗೆ ಪರಸ್ಪರವಿರೋಧವು ಬಂದಿರುವಾಗ ವಿಶೇಷವಾಕ್ಯದಲ್ಲಿ ಹೇಳಿರುವ ಅರ್ಥವನ್ನು ಅಲ್ಲಿ ಹೇಳಿದಂತೆಯೇ ಸ್ವೀಕರಿಸ ಬೇಕು. ಸಾಮಾನ್ಯವಚನಕ್ಕೆ ಅರ್ಥ ಸಂಕೋಚವನ್ನು ಮಾಡಿ ವಿಶೇಷವಾಕ್ಯಕ್ಕೆ ಅನುಗುಣವಾದ ಅರ್ಥವನ್ನು ಹೇಳಬೇಕು. ಇದು ಲೋಕ ಮತ್ತು ಶಾಸ್ತ್ರಗಳಿಂದ ಸಿದ್ಧವಾದ ನ್ಯಾಯ. ಈ ನ್ಯಾಯವನ್ನು ಅನುಸರಿಸಿ ಸಾಮಾನ್ಯವಚನವಾಗಿರುವ ಆಪಸ್ತಂಬ ವಚನದಲ್ಲಿರುವ 'ಪ್ರತಿಪತ್' ಎಂಬ ಪದಕ್ಕೆ ಅರ್ಥಸಂಕೋಚವನ್ನು ಮಾಡಿ ಕೃಷ್ಣಪಕ್ಷದ ಪಾಡ್ಯ ಎಂದು ಅರ್ಥವನ್ನು ಹೇಳಿರುವುದೂ ವಿಶೇಷವಚನವಾಗಿರುವ ಯುಗ್ಮವಾಕ್ಯ ಮುಂತಾದವುಗಳಲ್ಲಿರುವ 'ಪ್ರತಿಪತ್' ಎಂಬ ಪದಕ್ಕೆ ಅಲ್ಲಿ ಹೇಳಿದಂತೆಯೇ ಶುಕ್ಲಪಕ್ಷದ ಪಾಡ್ಯ ಎಂಬ ಅರ್ಥವನ್ನು ಹೇಳಿರುವುದೂ ಸ್ಮೃತಿಮುಕ್ತಾವಲೀಕಾರರ ಪ್ರಾಮಾಣಿಕತೆಯನ್ನು ಸ್ಪಷ್ಟಪಡಿಸುತ್ತದೆ.

ಸ್ಮೃತಿಮುಕ್ತಾವಲೀಕಾರರು ಶುಕ್ಲಪಕ್ಷದ ಪಾಡ್ಯದಲ್ಲಿ ಮಾಡಬೇಕಾದ ಹಬ್ಬ ಮುಂತಾದ ಎಲ್ಲಾ ಕಾರ್ಯಗಳನ್ನು ಅಮಾವಾಸ್ಯಾ ಸಂಬಂಧವುಳ್ಳ ದಿನದಲ್ಲಿಯೇ ಮಾಡಬೇಕೆಂಬ ವಿಷಯದಲ್ಲಿ ಯುಗ್ಮವಾಕ್ಯ ಮುಂತಾದ ಪ್ರಮಾಣವಚನಗಳನ್ನು ಉದಾಹರಿಸಿರುವರು. ಆ ಪ್ರಮಾಣವಚನಗಳಿಗೆ ಆಪಸ್ತಂಬವಚನದ ವಿರೋಧವನ್ನು ತೋರಿಸಿ ಆ ವಿರೋಧವನ್ನೂ ಪರಿಹರಿಸಿ ತಮ್ಮ ನಿರ್ಣಯವನ್ನು ದೃಢಪಡಿಸಿರುವರು. ಹೀಗಿರುವಾಗ ರಿತ್ತಿಯವರು 'ಅಮಾವಾಸ್ಯಾದಿನದಿಂದ ಯುಕ್ತವಾಗಿರುವ ಪಾಡ್ಯದಿನದಲ್ಲಿ ಹಬ್ಬವನ್ನು ಮಾಡಬೇಕೆಂಬ ಈ ನಿರ್ಣಯವು ಸ್ಮೃಮುಕ್ತಾವಲಿಗೆ ವಿರುದ್ಧ' ಎಂದು ಘೋಷಿಸುತ್ತಿರುವುದು ಗಮನಾರ್ಹ.

## ವೇಧಸ್ವರೂಪ

(12) ಪಕ್ಷದ್ವಯೇಽಪಿ ತಿಥಯಸ್ತಿಥಿಂ ಪೂರ್ವಾಂ ತಥೋಽತ್ತರಾಂ।
ತ್ರಿಭಿರ್ಮುಹೂರ್ತೈರ್ವಿಧ್ಯಂತಿ ಸಾಮಾನ್ಯೋಽಯಂ ವಿಧಿಃ
ಸ್ಮೃತಃ ॥

"ಹಿಂದಿನ ತಿಥಿಯು ಸೂರ್ಯೋದಯಾನಂತರದಲ್ಲಿ ಆರುಗಳಿಗೆ ಅಥವಾ ಅದಕ್ಕಿಂತ ಅಧಿಕವಾಗಿದ್ದರೆ ಹಿಂದಿನ ತಿಥಿಯ ವೇಧವು ಮುಂದಿನ ತಿಥಿಗೂ ಮುಂದಿನ ತಿಥಿಯು ಸೂರ್ಯೋದಯಾನಂತರದಲ್ಲಿ 24 ಗಳಿಗೆ ಅಥವಾ ಅದಕ್ಕಿಂತ ಪೂರ್ವದಲ್ಲಿ ಆರಂಭಿಸಿದರೆ ಮುಂದಿನ ತಿಥಿಯ ವೇಧವು ಹಿಂದಿನ ತಿಥಿಗೂ ಇದೆಯೆಂದು ತಿಳಿಯ ಬೇಕು. ಉದಾಹರಣೆ—ಅಮಾವಾಸ್ಯಾ ತಿಥಿಯು ಪಂಚಾಂಗದಲ್ಲಿ 6 ಗಳಿಗೆ ಅಥವಾ ಅದಕ್ಕಿಂತ ಅಧಿಕವಾಗಿ ಬರೆದಿರುತ್ತದೆ. ಆಗ ಪಾಡ್ಯತಿಥಿಗೆ ಅಮಾವಾಸ್ಯಾತಿಥಿಯ ವೇಧವಿದೆಯೆಂದು ತಿಳಿಯ ಬೇಕು. ಇದೇ ಉದಾಹರಣದಲ್ಲಿ ಪಾಡ್ಯತಿಥಿಯು ಅಮಾವಾಸ್ಯಾ ದಿನದಲ್ಲಿ 24 ಗಳಿಗೆಗಳಿಗಿಂತ ಹಿಂದೆ ಆರಂಭಿಸಿರುವುದರಿಂದ ಅಮಾವಾಸ್ಯಾ ತಿಥಿಗೆ ಪಾಡ್ಯತಿಥಿಯ ವೇಧವಿದೆಯೆಂದೂ ತಿಳಿಯ ಬೇಕು. ಈಗ ನಿರ್ಣಯಿಸಿರುವ ವೇಧವು ಪಾಡ್ಯ ಮುಂತಾದ ಎಲ್ಲಾ ತಿಥಿಗಳಿಗೂ ಸಾಧಾರಣವಾಗಿರುತ್ತದೆ. ವೇಧದ ವಿಷಯದಲ್ಲಿ ಗ್ರಂಥಕಾರರಲ್ಲಿ ಅಭಿಪ್ರಾಯ ಭೇದವಿದೆ. ಆದರೆ ಈಗ ಹೇಳಿರುವ ವೇಧವೇ ಗ್ರಾಹ್ಯ" ಇದು ಸ್ಮೃತಿಮುಕ್ತಾ

ವಲೀಕಾರರ ನಿರ್ಣಯ. ಈ ನಿರ್ಣಯವನ್ನು ಅನುಸರಿಸಿ ಈ ಗ್ರಂಥದಲ್ಲಿ ಬಂದಿರುವ ಎಲ್ಲಾ ವೇಧಶಬ್ದಗಳಿಗೂ ಅರ್ಥವನ್ನು ತಿಳಿಯ ಬೇಕು.

## ಮೋಲ್ಕಂಡನಿರ್ಣಯವನ್ನು ಬಿಡ ಬೇಕಾದ ಸಂದರ್ಭ

(13) ಅತ್ರೈವಂ ವಿವೇಕಃ, ಶುಕ್ಲಪಕ್ಷೇ ಪೂರ್ವವಿದ್ಧಾ ಗ್ರಾಹ್ಯಾ, ಕೃಷ್ಣಪಕ್ಷೇ ಪರವಿದ್ಧೇತ್ಯೇವ ಸಾಮಾನ್ಯತಃ. ಕ್ವಚಿದನ್ಯಥಾ. ವಿಶೇಷಸ್ತು ವಚನವಿಶೇಷಾದವಗಂತವ್ಯಃ.

"ಶ್ರಾದ್ಧನಿರ್ಣಯ ವಿಷಯದಲ್ಲಿ ಅಮಾವಾಸ್ಯೆಯ ವೇಧವುಳ್ಳ ಶ್ರಾದ್ಧವು ಶುಕ್ಲಪಕ್ಷದಲ್ಲಿಯೂ ಬಿದಿಗೆಯ ವೇಧವುಳ್ಳ ಶ್ರಾದ್ಧವು ಕೃಷ್ಣಪಕ್ಷದಲ್ಲಿಯೂ ಗ್ರಾಹ್ಯವೆಂದು ತಿಳಿಯಬೇಕು. ಇದು ಸಾಮಾನ್ಯ ನಿಯಮವಾಗಿದೆ. ಇದಕ್ಕೆ ವಿರುದ್ಧವಾದ ವಿಶೇಷವಚನಗಳಿದ್ದರೆ ಆ ವಿಶೇಷವಚನಗಳಲ್ಲಿದ್ದಂತೆ ತಿಳಿಯ ಬೇಕು." ಇದು ಸ್ಮೃತಿಮುಕ್ತಾವಲೀಕಾರರ ಹೇಳಿಕೆ.

ಸ್ಮೃತಿಮುಕ್ತಾವಲೀಕಾರರು ಹೇಳಿರುವ ಮೋಲ್ಕಂಡ ವಚನವು ಸ್ಮೃತಿಮುಕ್ತಾವಲೀಕಾರರ ಸಿದ್ಧಾಂತವನ್ನು ಖಂಡಿಸುವುದಕ್ಕೆ ರಿತ್ತಿಯವರಿಗೆ ವರಪ್ರಸಾದವಾಯಿತು. ಅದನ್ನು ಸ್ವಲ್ಪ ಈಗ ವಿವರಿಸುತ್ತೇನೆ.

"ಮೋಲ್ಕಂಡ ನಿರ್ಣಯವು ಈ ನಿರ್ಣಯಕ್ಕೆ ವಿರುದ್ಧವಾದ ಪ್ರಮಾಣ ವಚನದಿಂದ ಬದಲಾವಣೆಯನ್ನು ಪಡೆಯುತ್ತದೆ' ಎಂದು ಗ್ರಂಥಕಾರರೇ ಬರೆದಿರುತ್ತಾರೆ. ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಇವರು ಬರೆದಿರುವ ನಿರ್ಣಯಕ್ಕೆ ವಿರುದ್ಧವಾದ ವಚನಗಳು ಉದಾಹರಿಸಲ್ಪಟ್ಟಿವೆ. ಆದ್ದರಿಂದ ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಉದಾಹರಿಸಿರುವ ವಚನಗಳ ವಿರೋಧವು ಗ್ರಂಥಕಾರರು ಮಾಡಿರುವ ಈ ನಿರ್ಣಯಕ್ಕೆ ಬರುವುದರಿಂದ ಗ್ರಂಥಕಾರರು ಮಾಡಿರುವ ನಿರ್ಣಯನ್ನು ಬಿಡುವುದು ಗ್ರಂಥಕಾರರಿಗೇ ಸಂಮತವಾಗಿರುತ್ತದೆ." ಇದು 'ಕ್ವಚಿದನ್ಯಥಾ, ವಿಶೇಷಸ್ತು ವಚನವಿಶೇಷಾದವಗಂತವ್ಯಃ' ಎಂಬ ವಾಕ್ಯದಿಂದ ರಿತ್ತಿಯವರಿಗೆ ಲಬ್ಧವಾದ ವರಪ್ರಸಾದ.

'ಏಕಾದಶೀ ಶ್ರಾದ್ಧವನ್ನು ಮಾಡಕೂಡದು' ಎಂದು ಸ್ಮೃತಿಮುಕ್ತಾವಲೀಕಾರರು ಸಮರ್ಥಿಸಿರುವರು. ಅಲ್ಲಿಯೂ 'ಕ್ವಚಿದನ್ಯಥಾ ವಿಶೇಷಸ್ತು

ವಚನವಿಶೇಷಾದವಗಂತವ್ಯಃ' ಎಂಬ ಗ್ರಂಥಕಾರರ ವಚನವು ವರವನ್ನು ಕೊಡುವುದಿಲ್ಲವೇ? ಆ ವರದಿಂದ ನಿರ್ಣಯಸಿಂಧು ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಉದಾಹರಿಸಿರುವ ಪ್ರಮಾಣಗಳ ವಿರೋಧದಿಂದ ತಾನು ಮಾಡಿರುವ ನಿರ್ಣಯವು ತನ್ನಿಂದಲೇ ತ್ಯಜಿಸಲ್ಪಡುವುದು ಗ್ರಂಥಕಾರರಿಗೆ ಸಮ್ಮತವಲ್ಲವೇ? ಈ ವರಪ್ರಸಾದದಲ್ಲಿ ಗೌರವವುಳ್ಳ ರಿತ್ತಿಯವರು ಗ್ರಂಥ ಕಾರರ ನಿರ್ಣಯವನ್ನು ಬಿಟ್ಟು ತನಗೆ ಪರಮಪವಿತ್ರಗ್ರಂಥಗಳಾಗಿರುವ ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಹೇಳಿದಂತೆ ಏಕಾದಶೀಶ್ರಾದ್ಧ ಭಸ್ಮ ಧಾರಣೆ ರುದ್ರಾಕ್ಷಧಾರಣೆಗಳನ್ನು ಮಾಡಲಿ. ಆದರೆ ಶ್ರೀರಾಘವೇಂದ್ರಗುರು ಸಾರ್ವಭೌಮರ ಭಕ್ತರು ಅವರ ಶಿಷ್ಯರಾದ ಶ್ರೀಕೃಷ್ಣಾಚಾರ್ಯರಿಂದ ಬರೆಯ ಲ್ಪಟ್ಟ ನಿರ್ಣಯವನ್ನು ತ್ಯಜಿಸಲಾರರು. ಇದು ಗಮನಾರ್ಹ.

'ಯಾರನ್ನೂ ಹಿಂಸಿಸಬಾರದು' ಎಂದು ಹೇಳಿದವರು ಮುಂದಿನ ವಾಕ್ಯದಲ್ಲಿಯೇ 'ಎಲ್ಲರನ್ನೂ ಹಿಂಸಿಸಬೇಕು' ಎಂದು ಹೇಳಿದರೆ ಅವರನ್ನು ರಿತ್ತಿಯವರ ಪಂಕ್ತಿಯಲ್ಲಿ ಸೇರಿಸ ಬಹುದು. ಪರಮಪ್ರಾಮಾಣಿಕರಾದ ಸ್ಮೃತಿಮುಕ್ತಾವಲೀಕಾರರು 'ಅಮಾವಾಸ್ಯಾಯುಕ್ತವಾದ ಪಾಡ್ಯದಿನದಲ್ಲಿ ಹಬ್ಬವನ್ನು ಮಾಡಬೇಕು' ಎಂದು ಮೊದಲನೆಯ ವಾಕ್ಯದಲ್ಲಿ ಹೇಳಿ ಮರು ವಾಕ್ಯದಲ್ಲಿಯೇ 'ಅಮಾವಾಸ್ಯಾಯುಕ್ತವಾದ ಪಾಡ್ಯದಲ್ಲಿ ಹಬ್ಬವನ್ನು ಮಾಡಕೂಡದು' ಎಂದು ಖಂಡಿತವಾಗಿಯೂ ಹೇಳಲಾರರು ಮತ್ತು ಹೇಳಿಲ್ಲ ಎಂಬ ವಿಷಯದಲ್ಲಿ ವಾಚಕರಿಗೆ ನಂಬಿಕೆ ಇರುವ ವಿಷಯದಲ್ಲಿ ಸಂಶಯವಿಲ್ಲ.

ಪಾಡ್ಯತಿಥಿಗೆ ಹಿಂದಿನ ದಿನದಲ್ಲಿ ಅಮಾವಾಸ್ಯಾ ತಿಥಿಯ ಸಂಬಂಧವೂ ಮುಂದಿನ ದಿನದಲ್ಲಿ ಬಿದಿಗೆಯ ಸಂಬಂಧವೂ ಏರ್ಪಟ್ಟಾಗಲೇ ಅಮಾವಾಸ್ಯಾ ದಿನದಲ್ಲಿ ಹಬ್ಬವನ್ನು ಮಾಡಬೇಕೆಂದು ಸ್ಮೃತಿಮುಕ್ತಾವಲೀಕಾರರು ಪ್ರಮಾಣವಚನಗಳನ್ನು ಉದಾಹರಿಸಿ ಸಮರ್ಥಿಸಿರುವರು. ಈ ನಿರ್ಣಯ ವನ್ನು ವಿರೋಧಿಸುವ ಪ್ರಮಾಣಗಳನ್ನು ಉದಾಹರಿಸಿ ವಿರೋಧವನ್ನು ಪರಿಹರಿಸಿ ತಾನು ಮಾಡಿರುವ ನಿರ್ಣಯವನ್ನು ಊರ್ಜಿತಪಡಿಸಿರುವರು. 'ಕ್ವಚಿದನ್ಯಥಾ, ವಿಶೇಷಸ್ತು ವಿಶೇಷವಚನಾದವಗಂತವ್ಯಃ' ಎಂಬ ವಾಕ್ಯ ದಿಂದ ಅದೇ ನಿರ್ಣಯವನ್ನು ನಿರಾಕರಿಸುವರೇ?

ರತ್ತಿ ಆಚಾರ್ಯರು ಹಿಂದಿನ ದಿನದಲ್ಲಿ ಅಮಾವಾಸ್ಯಾಸಂಬಂಧವೂ ಮರುದಿನದಲ್ಲಿ ಬಿದಿಗೆಯ ಸಂಬಂಧವೂ ಪಾಡ್ಯಕ್ಕೆ ಏರ್ಪಟ್ಟಾಗ ಅಮಾವಾಸ್ಯಾ ದಿನದಲ್ಲಿ ಹಬ್ಬವನ್ನು ಸರ್ವಥಾ ಮಾಡಕೂಡದು ಎಂದು ಹೇಳಿರುವರು. ತಮ್ಮ ಈ ಸಿದ್ಧಾಂತವನ್ನೇ ಸ್ಮೃತಿಮುಕ್ತಾವಲೀಕಾರರೂ 'ಕ್ವಚಿದನ್ಯಥಾ, ವಿಶೇಷಸ್ತು ವಚನವಿಶೇಷಾದವಗಂತವ್ಯಃ' ಎಂಬ ವಚನದಿಂದ ಅಂಗೀಕರಿಸಿ ರುವುದಾಗಿಯೂ ಹೇಳುತ್ತಿರುವರು. ಇದು ಸ್ಮೃತಿಮುಕ್ತಾವಲೀಕಾರರು ತನ್ನ ನಿರ್ಣಯವನ್ನು ತಾನೇ ಖಂಡಿಸುತ್ತಿರುವುದಾಗಿ ಹೇಳಿದಂತಲ್ಲವೇ? ಹೀಗೆ ಮಾಡಲು ಅವರೇನು ರತ್ತಿಯವರೇ? ಈ ವಿಷಯವನ್ನು ವಾಚಕರು ಗಮನಿಸ ಬೇಕು.

ಮೇಲ್ಕಂಡ ವಿವರಣದಿಂದ ರತ್ತಿಯವರ 'ಕ್ವಚಿದನ್ಯಥಾ, ವಿಶೇಷಸ್ತು ವಚನವಿಶೇಷಾದವಗಂತವ್ಯಃ' ಎಂಬ ವಾಕ್ಯಕ್ಕೆ ಮಾಡಿರುವ ಅಪಾರ್ಥವು ತನ್ನನ್ನೂ ರತ್ತಿಯವರ ಸಾಲಿಗೆ ಸೇರಿಸಿ 'ವ್ಯಾಹತಿ ವಾರಿಧಿ' ಬಿರುದಿಗೆ ಗುರಿ ಯಾಗುವಂತೆ ಮಾಡುವುದರಿಂದ ಸ್ಮೃತಿಮುಕ್ತಾವಲೀಕಾರರಿಗೆ ಸಮ್ಮತವಲ್ಲ ಎಂದು ಸಿದ್ಧವಾಯಿತು.

ಇಷ್ಟರ ವರೆಗೆ ಸ್ಮೃತಿಮುಕ್ತಾವಲೀಕಾರರು ಮಾಡಿರುವ ಶುಕ್ಲಪಕ್ಷದ ಪಾಡ್ಯತಿಥಿಯ ನಿರ್ಣಯವನ್ನು ಸ್ಪಷ್ಟಪಡಿಸಿದ್ದಾಯಿತು. ಈಗ ಶುಕ್ಲಪಕ್ಷದ ಪಾಡ್ಯಗಳಲ್ಲಿ ಬಲಿಪಾಡ್ಯ ಮುಂತಾದ ವಿಶೇಷತಿಥಿಗಳ ನಿರ್ಣಯವನ್ನು ಮಾಡಿದಾಗ ಅವರು ಏನು ಹೇಳಿರುವರು? ಎಂಬ ವಿಷಯವನ್ನು ಸ್ಪಷ್ಟ ಪಡಿಸುತ್ತೇನೆ.

## ಬಲಿಪಾಡ್ಯನಿರ್ಣಯ

(14) ಅತ್ರ ಪೂರ್ವವಿದ್ಧಾಯಾಂ ಪ್ರತಿಪದಿ ಬಲ್ಯುತ್ಸವಃ ಕಾರ್ಯಃ।
ಶ್ರಾವಣೀ ದುರ್ಗನವಮೀ ತಥಾ ದುರ್ಗಾಷ್ಟಮೀ ಚ ಯಾ ॥
ಪೂರ್ವವಿದ್ಧಾ ಪ್ರಕರ್ತವ್ಯಾ ಶಿವರಾತ್ರಿರ್ಬಲೇರ್ದಿನಂ।
ಇತ್ಯಾದಿ ಸ್ಮೃತೇಃ ॥

"ಅಮಾವಾಸ್ಯಾತಿಥಿಯಿಂದ ಯುಕ್ತವಾಗಿರುವ ಪಾಡ್ಯದಿನದಲ್ಲಿ ಬಲಿ ಪಾಡ್ಯದಲ್ಲಿ ಮಾಡ ಬೇಕಾದ ಹಬ್ಬವನ್ನು ಮಾಡಬೇಕು. ಈ ವಿಷಯದಲ್ಲಿ

'ಶ್ರಾವಣೀ ದುರ್ಗನವಮೀ' ಮುಂತಾದ ಅನೇಕಸ್ಮೃತಿವಚನಗಳು ಪ್ರಮಾಣಗಳಾಗಿವೆ" ಇದು ಸ್ಮೃತಿಮುಕ್ತಾವಲೀಕಾರರ ವಚನ. ಈ ವಚನ ದಲ್ಲಿ 'ಬಲ್ಯುತ್ಸವ' ಅಂದರೆ 'ಬಲಿಪಾಡ್ಯದಿನದಲ್ಲಿ ಮಾಡಬೇಕಾದ ಎಲ್ಲಾ ಹಬ್ಬವನ್ನು ಅಮಾವಾಸ್ಯಾಸಂಬಂಧವುಳ್ಳ ಪಾಡ್ಯದಿನದಲ್ಲಿಯೇ ಮಾಡ ಬೇಕೆಂದು ಹೇಳಿರುವುದು ಗಮನಾರ್ಹ. ಈ ವಿಷಯದಲ್ಲಿ ಯಾವುದೋ ಒಂದು ವಾಕ್ಯವು ಆಧಾರವಾಗಿದೆ. ಎಂದು ತಿಳಿಯಬಾರದು. 'ಇತ್ಯಾದಿ ಸ್ಮೃತಿ' ಅಂದರೆ 'ಈ ಸ್ಮೃತಿಯಂತಿರುವ ಅನೇಕ ಸ್ಮೃತಿಗಳು ಆಧಾರ ವಾಗಿವೆ' ಎಂದು ಹೇಳಿರುವುದು ಗಮನಾರ್ಹ. ಈ ವಿಷಯದಲ್ಲಿ ಬರೀ ಆಚಾರವು ಪ್ರಮಾಣವಾಗಿಲ್ಲ. 'ಸ್ಮೃತೇಃ' ಅಂದರೆ ಆಚಾರಕ್ಕಿಂತಲೂ ಪ್ರಬಲವಾದ ಸ್ಮೃತಿವಾಕ್ಯವೂ ಆಧಾರವಾಗಿದೆ ಎಂದು ಹೇಳಿರುವುದು ಗಮನಾರ್ಹ. ಇದರಿಂದ ಆಚಾರಗಳಿಗೂ ಧರ್ಮಶಾಸ್ತ್ರವಚನಗಳಿಗೂ ವಿರೋಧ ಬಂದಾಗ ಆಚಾರವನ್ನು ಬಿಡಬೇಕು. ಸ್ಮೃತಿಯನ್ನೇ ಸ್ವೀಕರಿಸ ಬೇಕು ಎಂದು ಸೂಚಿಸಿರುವುದು ಗಮನಾರ್ಹ.

## ಬಲಿಪಾಡ್ಯನಿರ್ಣಯದಲ್ಲಿ ಪ್ರಮಾಣಗಳು

(15) ಸ ಚೋತ್ಸವೋ ಬ್ರಹ್ಮಪುರಾಣೇ ವಾಮನಪುರಾಣೇ ಭವಿಷ್ಯತ್ಪುರಾಣೇ ಚಾಭಿಹಿತಃ. ತಥಾ ವರಾಹಪುರಾಣೇ ತತ್ರ ಕರ್ತವ್ಯ ವಿಶೇಷೋಽಭಿಹಿತಃ.

"ಮೇಲೆ ಹೇಳಿದ ಬಲ್ಯುತ್ಸವವು ಬ್ರಹ್ಮಪುರಾಣ ವಾಮನಪುರಾಣ ಮತ್ತು ಭವಿಷ್ಯತ್ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಹಾಗೆಯೇ ವರಾಹ ಪುರಾಣದಲ್ಲಿ ಅಂದು ಮಾಡಬೇಕಾದ ವಿಶೇಷಕಾರ್ಯವು ವಿಶೇಷವಾಗಿ ಹೇಳಲ್ಪಟ್ಟಿದೆ."

(16) ಪ್ರತಿಪದ್ಯಪಿ ತೈಲೇನ ಸ್ನಾನಂ ಕುರ್ಯಾದ್ಬಲೇರ್ದಿನೇ।
ಪೂರ್ವಂ ಬಲಿಃ ಸ್ವರ್ಗರಾಜ್ಯಮಾಪ್ತವಾನ್ ಕೃಪಯಾ ಮಮ।
ವರಂ ತು ದತ್ತವಾನಸ್ಮೈ ಯೋ ನರಃ ಪ್ರತಿಪದ್ದಿನೇ।
ಹರ್ಷೇಣ ವಾಪಿ ರೋಷೇಣ ದುಃಖೇನಾಥ ಸುಖೇನ ವಾ॥

ಯುಕ್ತೋಽವಶಿಷ್ಯತೇ ತದ್ವತ್ಪ್ರಾಯೋ ವರ್ಷಂ ಕ್ರಮೇದಸೌ।
ಅತಸ್ತತ್ರ ಪ್ರಕುರ್ವೀತ ವಿಶೇಷಾನ್ಮಂಗಲೋದಯಂ ॥
ಬ್ರಾಹ್ಮಣೇಭ್ಯಸ್ತಥಾ ದಾನಂ ಮಹಾಫ಼ಲ್ಲಿಣ್ಯಫಲಪ್ರದಂ ।
ವಸ್ತ್ರಾಣ್ಯಶ್ವಾನ್ ಗಜಾನ್ಗಾಶ್ಚ ರಥಾನ್ ದಿವ್ಯಪರಿಚ್ಛದಾನ್ ॥
ಬ್ರಾಹ್ಮಣೇಭ್ಯಃ ಪ್ರದದ್ಯಾಚ್ಚ ವಿವಿಧಾನಿ ಧನಾನಿ ಚ ।
ಯಥಾ ಯಥೋಽತ್ಸವಂ ತಸ್ಯಾಂ ಕುರ್ಯಾದ್ಧೃಷ್ಟೋ ನರೋತ್ತಮಃ ॥
ತಥಾ ತಥಾ ಭವೇತ್ತಸ್ಯ ಹ್ಯುತ್ಸವೋ ಜನ್ಮಜನ್ಮನಿ ।

"ಬಲಿಪಾಡ್ಯದಿನದಲ್ಲಿ ಬಲಿಚಕ್ರವರ್ತಿಯು ಹಿಂದೆ ನನ್ನ ಅನುಗ್ರಹದಿಂದ ಈ ಮನ್ವಂತರದಲ್ಲಿ ಬಿಲಸ್ವರ್ಗವನ್ನು ಪಡೆದನು. ಮುಂದಿನ ಮನ್ವಂತರದಲ್ಲಿ ಸ್ವರ್ಗಾಧಿಪತಿಯಾಗುವನು. 'ಈ ದಿನದಲ್ಲಿ ಮನುಷ್ಯನು ಯಾವ ಮನೋಭಾವದಿಂದ ಯುಕ್ತನಾಗಿರುವನೋ ಅದರಂತೆಯೇ ಇಡೀ ವರ್ಷದಲ್ಲಿರುವನು.' ಎಂದು ವರವನ್ನು ಅವನಿಗೆ ಕೊಟ್ಟಿರುವೆನು. ಆದ್ದರಿಂದ ಬಲಿಪಾಡ್ಯದಿನದಲ್ಲಿ ತೈಲಾಭ್ಯಂಗ ದಾನ ಮುಂತಾದ ಎಲ್ಲಾ ಮಂಗಲಕಾರ್ಯಗಳನ್ನು ಮಾಡಬೇಕು" ಇದು ವರಾಹಪುರಾಣದಲ್ಲಿ ಶ್ರೀವರಾಹದೇವನು ಹೇಳಿರುವುದು.

ನವರಾತ್ರಿನಿರ್ಣಯದ ಬಗ್ಗೆ ಆಗ್ರಹವೇ? (ಪುಟ 13) "ಸ್ಮೃತಿಮುಕ್ತಾವಳಿಯಲ್ಲಿ ಬಲೀಂದ್ರಪೂಜೆಯನ್ನು ಅಮಾಯುಕ್ತವಾಗಿ ಮಾಡಬೇಕೆಂದು ನಿರ್ಣಯಿಸಲಾಗಿದೆ. ಇದು ಬಲೀಂದ್ರಪೂಜೆ ಮಾಡುವವರಿಗೆ ಮಾತ್ರ ಸಂಬಂಧಿಸಿದೆ. ಬಲಿಪ್ರತಿಪತ್ತನ್ನು ಇಟ್ಟುಕೊಂಡು ಅಭ್ಯಂಗಸ್ನಾನ ಮೊದಲಾದ ಮಂಗಳಕಾರ್ಯಗಳನ್ನು ಬಿದಿಗೆ ಯುಕ್ತವಾಗಿಯೇ ಆಚರಿಸಬೇಕು." ಇದು ರತ್ತಿಯವರ ಸುಭಾಷಿತವಾಗಿದೆ.

ಸ್ಮೃತಿಮುಕ್ತಾವಲೀಕಾರರು 'ಬಲ್ಯುತ್ಸವಃ' ಎಂಬ ಪದದಿಂದ ಬಲಿಪಾಡ್ಯದಲ್ಲಿ ಮಾಡಬೇಕಾದ ಹಬ್ಬವನ್ನು ಅಮಾವಾಸ್ಯಾಯುಕ್ತವಾದ ಪಾಡ್ಯದಿನದಲ್ಲಿಯೇ ಮಾಡ ಬೇಕೆಂದು ಹೇಳಿರುತ್ತಾರೆ. ಆ ಹಬ್ಬದಲ್ಲಿ ಅಭ್ಯಂಗ ಮುಂತಾದ ಎಲ್ಲಾ ಮಂಗಲಕಾರ್ಯಗಳೂ ಅಡಗಿವೆ ಎಂದು ಮುಂದಿನ

ವಾಕ್ಯಗಳಿಂದ ಹೇಳಿರುತ್ತಾರೆ. ತಾನು ಹೇಳಿರುವ ವಿಷಯವನ್ನು ಸಮರ್ಥಿಸುವುದಕ್ಕಾಗಿ ವಾಮನಪುರಾಣ ಮುಂತಾದ ನಾಲ್ಕು ಪುರಾಣಗಳ ಆಧಾರವನ್ನು ಕೊಟ್ಟಿರುತ್ತಾರೆ. ಹೀಗಿರುವಾಗ ಬಲಿಪೂಜೆಯನ್ನು ಮಾತ್ರ ಅಮಾವಾಸ್ಯಾಯುಕ್ತವಾದ ಪಾಡ್ಯದಿನದಲ್ಲಿ ಮಾಡ ಬೇಕೆಂದೂ ಅಭ್ಯಂಗ ಮುಂತಾದ ಮಂಗಲಕಾರ್ಯಗಳನ್ನು ಮಾಡಕೂಡದೆಂದೂ ಸ್ಮೃತಿಮುಕ್ತಾವಲೀಕಾರರು ಹೇಳಿರುವುದಾಗಿ ರಿತ್ತಿಯವರು ಅಪಪ್ರಚಾರ ಮಾಡುತ್ತಿರುವುದು ಗಮನಾರ್ಹ.

## ಶುಕ್ಲಪಕ್ಷದ ಪಾಡ್ಯದಲ್ಲಿ ವಿಶೇಷವಚನ

(17) ಪ್ರತಿಪದಿ ವಿಶೇಷಃ—

ಪ್ರತಿಪತ್ತು ಸಿತೇ ಪಕ್ಷೇ ದರ್ಶವಿದ್ಧಾ ಶುಭಾ ಸ್ಮೃತಾ ।
ಕೃಷ್ಣೇ ದ್ವಿತೀಯಯಾ ವಿದ್ಧಾ ತ್ರಿಮುಹೂರ್ತಾ ಭವೇದ್ಯದಿ ॥

"ಶುಕ್ಲ ಪಕ್ಷದ ಪಾಡ್ಯವು ಅಮಾವಾಸ್ಯಾತಿಥಿಯಿಂದ ಯುಕ್ತವಾಗಿದ್ದರೆ ಶುಭಕರವಾಗುತ್ತದೆ. ಕೃಷ್ಣಪಕ್ಷದ ಪಾಡ್ಯತಿಥಿಯು ಪಾಡ್ಯದಿನದಲ್ಲಿ ತ್ರಿಮುಹೂರ್ತ ಅಂದರೆ ಆರುಗಳಿಗೆ ಇದ್ದರೆ ಶುಭಕರವಾಗುತ್ತದೆ."

(18) ಜ್ಯೋತಿಃಶಾಸ್ತ್ರೇಪಿ—

ಪ್ರತಿಪಚ್ಛುಕ್ಲಪಕ್ಷೇ ತು ಪೂರ್ವವಿದ್ಧಾ ಶುಭಾವಹಾ ।
ಕೃಷ್ಣಪಕ್ಷೇ ಶುಭಾ ಜ್ಞೇಯಾ ಸಂಗವಸ್ಪರ್ಶಿನೀ ಯದಿ ॥

"ಶುಕ್ಲಪಕ್ಷದ ಪಾಡ್ಯವು ಅಮಾವಾಸ್ಯಾತಿಥಿಯಿಂದ ಯುಕ್ತವಾಗಿದ್ದರೆ ಶುಭಕರವಾಗುತ್ತದೆ. ಕೃಷ್ಣಪಕ್ಷದ ಪಾಡ್ಯವು ಪಾಡ್ಯದಿನದಲ್ಲಿ ಆರುಗಳಿಗೆಗಳಿಗಿಂತ ಅಧಿಕವಾಗಿದ್ದರೆ ಶುಭವಾಗಿರುತ್ತದೆ." ಈ ಎರಡು ವಾಕ್ಯಗಳು ಪಾಡ್ಯದ ವಿಷಯದಲ್ಲಿ ವಿಶೇಷವಚನ ಎಂಬ ಅಂಶವನ್ನು 'ಪ್ರತಿಪದಿ ವಿಶೇಷಃ' ಎಂಬ ಶೀರ್ಷಿಕದಿಂದ ಗ್ರಂಥಕಾರರು ಹೇಳಿರುತ್ತಾರೆ. ಈ ಎರಡು ವಿಶೇಷವಾಕ್ಯಗಳಲ್ಲಿಯೂ ಶುಕ್ಲಪಕ್ಷದ ಪಾಡ್ಯವು ಅಮಾವಾಸ್ಯಾಯುಕ್ತವಾಗಿದ್ದರೆ ಶುಭಕರವೆಂದು ಹೇಳಿರುವುದು ಗಮನಾರ್ಹ. ಕೃಷ್ಣಪಕ್ಷದ ಪಾಡ್ಯವು ಸೂರ್ಯೋದಯಾನಂತರದಲ್ಲಿ ಆರುಗಳಿಗೆ ಇದ್ದರೆ ಪಾಡ್ಯದಿನವು ಗ್ರಾಹ್ಯವೆಂದು ಮೊದಲನೆಯ ವಚನವೂ ಆರುಗಳಿಗೆಗಳಿಗಿಂತ ಹೆಚ್ಚಿದ್ದರೆ ಪಾಡ್ಯದಿನವು

ಗ್ರಾಹ್ಯ ಎಂದು ಎರಡನೆಯ ವಚನವೂ ಹೇಳಿರುವುದು ಗಮನಾರ್ಹ. ಕೃಷ್ಣಪಕ್ಷದ ಪಾಡ್ಯವೂ ಸಹ 6 ಗಳಿಗೆಗಳಿಗಿಂತ ಕಡಿಮೆಯಾಗಿದ್ದರೆ ಪಾಡ್ಯ ದಿನವು ಗ್ರಾಹ್ಯವಲ್ಲ. ಹುಣ್ಣಿಮೆಯೇ ಗ್ರಾಹ್ಯ ಎಂದು ಎರಡು ವಾಕ್ಯಗಳೂ ತಿಳಿಸಿರುವುದು ಗಮನಾರ್ಹ.

ಹೀಗೆ ಮೇಲ್ಕಂಡ ಎರಡುವಾಕ್ಯಗಳಿಂದ ಗ್ರಂಥಕಾರರು ಶುಕ್ಲಪಕ್ಷದ ಪಾಡ್ಯವು ಅಮಾವಾಸ್ಯಾಯುಕ್ತವಾಗಿದ್ದರೆ ಅಮಾವಾಸ್ಯಾದಿನದಲ್ಲಿಯೂ ಕೃಷ್ಣಪಕ್ಷದ ಪಾಡ್ಯವು ಆರು ಗಳಿಗೆಗಳಿಗಿಂತ ಕಡಿಮೆಯಾಗಿದ್ದರೆ ಹುಣ್ಣಿಮೆ ದಿನದಲ್ಲಿಯೂ ಪಾಡ್ಯದಿನದಲ್ಲಿ ಮಾಡ ಬೇಕಾದ ಎಲ್ಲಾ ಕಾರ್ಯಗಳನ್ನೂ ಮಾಡಬೇಕೆಂದು ಸಮರ್ಥಿಸಿರುವರು. ಅದು ಮಾತ್ರವಲ್ಲ ಈ ಎರಡು ವಚನಗಳು ಪಾಡ್ಯವನ್ನು ವಿಂಗಡಿಸಿ ಶುಕ್ಲಪಕ್ಷದ ಪಾಡ್ಯಕ್ಕೂ ಕೃಷ್ಣಪಕ್ಷದ ಪಾಡ್ಯಕ್ಕೂ ಬೇರೆ ಬೇರೆ ವ್ಯವಸ್ಥೆಯನ್ನು ಹೇಳಿವೆ.

ಹೀಗೆ ಹೇಳುತ್ತಾ ಹಿಂದೆ ಹೇಳಿದ ಆಪಸ್ತಂಬರ ವಾಕ್ಯಕ್ಕೆ ವ್ಯಾಖ್ಯಾನವನ್ನೂ ಮಾಡಿವೆ. ಗ್ರಂಥಕಾರರು ಇಂತಹ ಪ್ರಮಾಣವಾಕ್ಯಗಳನ್ನು ಉದಾಹರಿಸುತ್ತಾ ಆಪಸ್ತಂಬ ವಚನಕ್ಕೆ ತಾವು ಹಿಂದೆ ಮಾಡಿರುವ ವ್ಯಾಖ್ಯಾನವು ಪ್ರಾಮಾಣಿಕ ಎಂಬ ಅಂಶವನ್ನು ಸೂಚಿಸಿರುವುದು ಗಮನಾರ್ಹ.

## ಬಲಿಪಾಡ್ಯದಲ್ಲಿ ವಿಶೇಷವಚನ

(19) ಬಲ್ಯುತ್ಸವೇಽಪಿ ವಿಶೇಷೋಽಭಿಹಿತೋ ಮತ್ಸ್ಯಪುರಾಣೇ
ಸಂಪ್ರಾಪ್ತೇ ಕಾರ್ತಿಕೇ ಮಾಸಿ ಸಿತಾ ಯಾ ಪ್ರತಿಪದ್ಭವೇತ್ ।
ಬಲ್ಯುತ್ಸವಸ್ತು ಕರ್ತವ್ಯಃ ಸಂಮುಖಾ ಯಾ ತಿಥಿರ್ಭವೇತ್ ॥

(20) ಪ್ರತಿಪತ್ಸಂಮುಖಾ ಕಾರ್ಯಾ ಶುಕ್ಲಪಕ್ಷಸ್ಯ ಕಾರ್ತಿಕೇ ।
ಸಂಮುಖಾ ಸಾಯಾಹ್ನವ್ಯಾಪಿನೀ ॥

"ಬಲಿಪಾಡ್ಯದಲ್ಲಿ ಮಾಡ ಬೇಕಾದ ಹಬ್ಬದ ವಿಷಯದಲ್ಲಿ ಮತ್ಸ್ಯಪುರಾಣದಲ್ಲಿ ವಿಶೇಷವಚನವು ಹೇಳಲ್ಪಟ್ಟಿದೆ. ಅದನ್ನು ಈಗ ಹೇಳುವೆನು. ಈ ಶ್ಲೋಕದಲ್ಲಿಯೂ ಮುಂದಿನ ಶ್ಲೋಕಗಳಲ್ಲಿಯೂ ಸಂಮುಖ ಎಂಬ ಪದವಿದೆ. ಅದಕ್ಕೆ ಸೂರ್ಯೋದಯಾನಂತರದಲ್ಲಿ 24 ಗಳಿಗೆಗಳ ಮೇಲೆ

30 ಗಳಿಗೆಗಳ ವರೆಗಿನ ಕಾಲದಲ್ಲಿ ಇರುವ ತಿಥಿ ಎಂದು ಅರ್ಥವನ್ನು ತಿಳಿಯಬೇಕು. ಕಾರ್ತಿಕ ಶುಕ್ಲಪಕ್ಷದ ಪಾಡ್ಯದಿನವು ಸಂಮುಖ ಅಂದರೆ ಸೂರ್ಯೋದಯಾನಂತರದಲ್ಲಿ 24 ಗಳಿಗೆಗಳ ಮೇಲೆ 30 ಗಳಿಗೆಗಳ ವರೆಗೆ ಎಂದು ಇರುತ್ತದೆಯೋ ಅಂದೇ ಹಬ್ಬವನ್ನು ಮಾಡಬೇಕು."

(21) ಬಲ್ಯುತ್ಸವಂ ತು ಪೂರ್ವೇದ್ಯುಸ್ತ್ರಿಮುಹೂರ್ತಾ ಯದಾ ಭವೇತ್ (ಗರ್ಗವಚನ)

"ಇದು ಗರ್ಗಾಚಾರ್ಯರ ವಚನ. ಈ ವಾಕ್ಯದಲ್ಲಿ ಹಿಂದಿನ ದಿನದಲ್ಲಿ ಅಂದರೆ ಅಮಾವಾಸ್ಯಾದಿನದಲ್ಲಿ ಸೂರ್ಯಾಸ್ತಮನಕ್ಕಿಂತ ಹಿಂದೆ ಮೂರು ಮುಹೂರ್ತ ಅಂದರೆ ಆರುಗಳಿಗೆ ಪಾಡ್ಯವು ಇದ್ದರೆ ಅಂದೇ ಬಲಿಪಾಡ್ಯದಲ್ಲಿ ಮಾಡ ಬೇಕಾದ ಹಬ್ಬವನ್ನು ಮಾಡಬೇಕು."

ಸೂರ್ಯೋದಯಾನಂತರದಲ್ಲಿ 30 ಗಳಿಗೆಗಳಿಗೆ ಸರಿಯಾಗಿ ಸೂರ್ಯಾಸ್ತಮನವಾಗುವಾಗ ಸೂರ್ಯಾಸ್ತಮನಕ್ಕಿಂತ ಪೂರ್ವದಲ್ಲಿ ಮೂರು ಮುಹೂರ್ತ ಅಂದರೆ ಅಂದಿನ ಸೂರ್ಯೋದಯಾನಂತರದಲ್ಲಿ 24 ಗಳಿಗೆಗಳ ಮೇಲೆ 30 ಗಳಿಗೆಗಳ ವರೆಗಿರುವ ಆರು ಗಳಿಗೆಗಳು ಸಾಯಾಹ್ನ ಅಂದರೆ ಸಾಯಂಕಾಲವೇ ಆಗುತ್ತದೆ. ಮೇಲ್ಕಂಡ ಮೂರು ಶ್ಲೋಕಗಳಲ್ಲಿ ಮೊದಲನೆಯ ಎರಡು ಶ್ಲೋಕಗಳಲ್ಲಿ ಹೇಳಿರುವ ಸಂಮುಖ ಎಂಬ ಪದವು ಮೂರನೆಯ ಶ್ಲೋಕಗಳಲ್ಲಿರುವ ಸೂರ್ಯಾಸ್ತಮನಕ್ಕಿಂತ ಪೂರ್ವದಲ್ಲಿರುವ ತ್ರಿಮುಹೂರ್ತ ಎಂದು ವಿವರಿಸಲ್ಪಟ್ಟಿದೆ. ಈ ಆಧಾರವನ್ನಿಟ್ಟುಕೊಂಡು ಹಿಂದಿನ ಎರಡು ಶ್ಲೋಕದಲ್ಲಿರುವ ಸಂಮುಖ ಎಂಬ ಪದಕ್ಕೆ ಸಾಯಾಹ್ನ ವ್ಯಾಪಿನೀ ಎಂದು ಗ್ರಂಥಕಾರರು ವ್ಯಾಖ್ಯಾನ ಮಾಡಿರುತ್ತಾರೆ. ಆದ್ದರಿಂದ ಸ್ಮೃತಿಮುಕ್ತಾವಲೀಕಾರರು ಯಾವ ಪದಕ್ಕೆ ವ್ಯಾಖ್ಯಾನವನ್ನು ಮಾಡಿದರೂ ಸಾಧಾರವಾಗಿಯೇ ಮಾಡುತ್ತಾರೆ ಎಂಬ ಅಂಶವು ಗಮನಾರ್ಹ. ಅದಕ್ಕಾಗಿಯೇ ಈ ಎರಡನೆಯ ಶ್ಲೋಕವನ್ನು ಉದಾಹರಿಸಿರುವರು ಎಂಬ ಅಂಶವೂ ಗಮನಾರ್ಹ.

(22) ಮುಖ್ಯಾಯಾಃ ಪೂರ್ವವಿದ್ಧಾಯಾಃ ಪ್ರತಿಪದ್ಯಾಹ್ಯಸಂಭವೇ।
ಬಲ್ಯುತ್ಸವಸ್ತು ಕರ್ತವ್ಯೋದ್ಯೂತಾದೀನ್ಯತ್ರರೇಽಹನಿ ॥
ಸಂಗವೇ ಪೂರ್ವವಿದ್ಧೇ ವಾ ನಿಷಿದ್ಧಾ ಪರಸಂಯುತಾ।
(ವೃದ್ಧಗರ್ಗವಚನ) ಇತ್ಯಾದಿ.

"ಅಮಾವಾಸ್ಯಾಸಂಬಂಧವುಳ್ಳ ಪಾಡ್ಯತಿಥಿಯು ಸಿಗದಿರುವಾಗ ಪಾಡ್ಯದಿನದಲ್ಲಿಯೇ ಬಲಿಪಾಡ್ಯದಲ್ಲಿ ಮಾಡ ಬೇಕಾದ ಹಬ್ಬ ಜೂಜಾಟ ಮುಂತಾದ ಎಲ್ಲಾ ಕಾರ್ಯಗಳನ್ನು ಮಾಡಬೇಕು. ಅಮಾವಾಸ್ಯಾ ಸಂಬಂಧವುಳ್ಳ ಪಾಡ್ಯವು ಸಿಕ್ಕಿದಾಗ ಮರುದಿನದಲ್ಲಿ ಪಾಡ್ಯತಿಥಿಯು ಸಂಗವ ಅಂದರೆ 6 ಗಳಿಗೆಗಳಿಗಿಂತ ಅಧಿಕವಾಗಿದ್ದರೂ ಪಾಡ್ಯದಿನದಲ್ಲಿ ಹಬ್ಬವನ್ನು ಮಾಡುವುದು ನಿಷಿದ್ಧವಾಗಿದೆ." "ಈಗ ನಾನು ಉದಾಹರಿಸಿರುವ ಪ್ರಮಾಣ ಗಳು ಮಾತ್ರವಲ್ಲ. 'ಇತ್ಯಾದಿ' ಅಂದರೆ ಇಂತಹ ಅಸಂಖ್ಯಪ್ರಮಾಣಗಳು ಈ ವಿಷಯವನ್ನು ಸಮರ್ಥಿಸುತ್ತವೆ." ಇದು ದೀಪಾವಳಿ ವಿಷಯದಲ್ಲಿ ಸ್ಮೃತಿಮುಕ್ತಾವಲೀಕಾರರು ಉದಾಹರಿಸಿರುವ ಪ್ರಮಾಣಗಳು. ಈ ಪ್ರಮಾಣಗಳ ಆಧಾರದಿಂದ (14) 'ಪೂರ್ವವಿದ್ಧಾಯಾಂ ಪ್ರತಿಪದಿ ಬಲ್ಯುತ್ಸವಃ ಕಾರ್ಯಃ' ಅಂದರೆ ಅಮಾವಾಸ್ಯಾಯುಕ್ತವಾದ ಪಾಡ್ಯ ತಿಥಿಯಲ್ಲಿ ಬಲಿಪಾಡ್ಯದಲ್ಲಿ ಮಾಡ ಬೇಕಾದ ಎಲ್ಲಾ ಉತ್ಸವಗಳನ್ನೂ ಮಾಡ ಬೇಕೆಂದು ಸಮರ್ಥಿಸಿರುವರು. ಈ ವಾಕ್ಯದಲ್ಲಿ 'ಬಲ್ಯುತ್ಸವಃ' ಎಂಬ ಪದ ವನ್ನು ಉಪಯೋಗಿಸಿರುವುದು ಗಮನಾರ್ಹ. (15) ಸ ಚೋತ್ಸವಃ ಎಂಬ ಮೇಲ್ಕಂಡ ವಾಕ್ಯದಲ್ಲಿಯೂ ಉತ್ಸವ ಎಂಬ ಪದವನ್ನು ಉಪಯೋಗಿ ಸಿರುವುದು ಗಮನಾರ್ಹ. ಮೇಲೆ ಉದಾಹರಿಸಿರುವ ವರಾಹಪುರಾಣ ವಚನದಲ್ಲಿಯೂ ಮಂಗಲೋದಯಂ ಎಂಬ ಪದವನ್ನೂ ಉತ್ಸವಂ ಕುರ್ಯಾತ್ ಎಂಬ ವಾಕ್ಯವನ್ನೂ ಉಪಯೋಗಿಸಿರುವುದು ಗಮನಾರ್ಹ. (16) 'ಪ್ರತಿಪದ್ಯಪಿ ತೈಲೇನ ಸ್ನಾನಂ ಕುರ್ಯಾದ್ಬಲೇರ್ದಿನೇ' ಅಮಾ ವಾಸ್ಯಾಯುಕ್ತವಾದ ಪಾಡ್ಯದಲ್ಲಿ ಹಬ್ಬವನ್ನು ಮಾಡ ಬೇಕೆಂದು ಪ್ರತಿಜ್ಞೆ ಮಾಡಿದ ಮೇಲೆ ಅದಕ್ಕೆ ಆಧಾರವಾಗಿ ಉದಾಹರಿಸಿರುವ ಈ ವಾಕ್ಯದಲ್ಲಿ ತೈಲಾಭ್ಯಂಗವನ್ನು ಮಾಡ ಬೇಕೆಂದು ಹೇಳಿರುವುದು ಅತ್ಯಂತ ಗಮನಾರ್ಹ. (19) ಬಲ್ಯುತ್ಸವೇಽಪಿ ಎಂಬ ವಾಕ್ಯದಲ್ಲಿಯೂ ಅಮಾವಾಸ್ಯಾಯುಕ್ತವಾದ ಪಾಡ್ಯದಿನದಲ್ಲಿಯೇ ಹಬ್ಬವನ್ನು ಮಾಡಬೇಕು ಎಂಬವಿಷಯವನ್ನು ಸಮರ್ಥಿ ಸುವುದಕ್ಕಾಗಿ ಉದಾಹರಿಸಿರುವ ಎಲ್ಲಾ ಪ್ರಮಾಣವಾಕ್ಯಗಳಲ್ಲಿಯೂ ಬಲ್ಯುತ್ಸವ ಎಂಬ ಪದವನ್ನು ಹೇಳಿರುವುದು ಅತ್ಯಂತ ಗಮನಾರ್ಹ.

# ಸ್ಮೃತಿಮುಕ್ತಾವಲಿಯಲ್ಲಿ ಉದಾಹರಿಸಿರುವ ಪ್ರಮಾಣವಚನಗಳ ಕ್ರಮ

## ಆಪಸ್ತಂಬವಚನ

(1) 'ಪ್ರತಿಪತ್ಸದ್ವಿತೀಯಾ ಸ್ಯಾತ್' ಇದು ಆಪಸ್ತಂಬವಚನ. ಈ ವಾಕ್ಯದಲ್ಲಿ ಪಾಡ್ಯ ಎಂದು ಮಾತ್ರ ಹೇಳಿದೆ. ಶುಕ್ಲಪಕ್ಷ ಪಾಡ್ಯವೆಂದಾಗಲೀ ಕೃಷ್ಣಪಕ್ಷದ ಪಾಡ್ಯವೆಂದಾಗಲೀ ಹೇಳಿಲ್ಲ. ಆದ್ದರಿಂದ ಇದು ಪಾಡ್ಯನಿರ್ಣಯ ವಿಷಯದಲ್ಲಿ ಸಾಮಾನ್ಯವಚನವೆನಿಸುತ್ತದೆ.

## ಯುಗ್ಮವಾಕ್ಯ

ಈ ವಾಕ್ಯದಲ್ಲಿ ಎರಡೆರಡು ತಿಥಿಗಳಿಗೆ ಒಂದೊಂದು ಜೋಡಿಗಳಂತೆ ಹದಿನಾಲ್ಕು ತಿಥಿಗಳಿಗೆ ಏಳುಜೋಡಿಗಳು ಹೇಳಲ್ಪಟ್ಟಿವೆ. ಅವುಗಳಲ್ಲಿ ಆರು ಜೋಡಿಗಳಿಗೆ ಸಂಬಂಧಿಸಿದ ಹನ್ನೆರಡುತಿಥಿಗಳನ್ನು ಹೇಳುವಾಗ ಶುಕ್ಲಪಕ್ಷದ ತಿಥಿಗಳೆಂದಾಗಲೀ ಕೃಷ್ಣಪಕ್ಷದ ತಿಥಿಗಳೆಂದಾಗಲೀ ಹೇಳಲೂ ಇಲ್ಲ. ಹಾಗೆ ತಿಳಿಯುವುದಕ್ಕೆ ಅವಕಾಶವನ್ನೂ ಕೊಟ್ಟಿಲ್ಲ. ಆದ್ದರಿಂದ ಆ ಹನ್ನೆರಡು ತಿಥಿಗಳ ನಿರ್ಣಯದ ವಿಷಯದಲ್ಲಿ ಈ ಯುಗ್ಮವಾಕ್ಯವು ಸಾಮಾನ್ಯವಚನ ವೆನಿಸುತ್ತದೆ.

ಅಮಾವಾಸ್ಯಾ ಮತ್ತು ಪಾಡ್ಯ ಈ ಎರಡುತಿಥಿಗಳ ಜೋಡಿಯು ಏಳನೆಯ ಜೋಡಿಯೆಂದು ಹೇಳಿದೆ. ಈ ಜೋಡಿಯಲ್ಲಿ ಸೇರಿರುವ ಪಾಡ್ಯ ತಿಥಿಯು ಶುಕ್ಲಪಕ್ಷದ ಪಾಡ್ಯವೆಂದಾಗಲೀ ಕೃಷ್ಣಪಕ್ಷದ ಪಾಡ್ಯವೆಂದಾಗಲೀ ಹೇಳಿಲ್ಲ. ಆದರೂ ಅಮಾವಾಸ್ಯೆಯೊಡನೆ ಜೋಡಿಯಾಗುವುದಕ್ಕೆ ಅರ್ಹತೆ ಯುಳ್ಳ ಪಾಡ್ಯವು ಶುಕ್ಲಪಕ್ಷದ ಪಾಡ್ಯವೇ ಹೊರತು ಕೃಷ್ಣಪಕ್ಷದ ಪಾಡ್ಯವಲ್ಲ. ಆದ್ದರಿಂದ ಈ ಯುಗ್ಮವಾಕ್ಯದಲ್ಲಿರುವ 'ಪ್ರತಿಪತ್' ಎಂಬ ಪದವು ಶುಕ್ಲ ಪಕ್ಷದ ಪಾಡ್ಯವನ್ನೇ ತಿಳಿಸುತ್ತದೆ. ಈ ಕಾರಣದಿಂದ ಪಾಡ್ಯತಿಥಿಯ ನಿರ್ಣಯ ವಿಷಯದಲ್ಲಿ ಈ ಯುಗ್ಮವಾಕ್ಯವು ವಿಶೇಷವಾಕ್ಯವೆನಿಸುತ್ತದೆ.

ಈ ಯುಗ್ಮವಾಕ್ಯವು ಶುಕ್ಲಪಕ್ಷದ ಹನ್ನೆರಡು ಪಾಡ್ಯತಿಥಿಗಳನ್ನು ಸಾಮಾನ್ಯವಾಗಿ ನಿರ್ಣಯಿಸುತ್ತದೆ. ಆದ್ದರಿಂದ ಶುಕ್ಲಪಕ್ಷದ ಪಾಡ್ಯತಿಥಿಗಳ ನಿರ್ಣಯ ವಿಷಯದಲ್ಲಿ ಸಾಮಾನ್ಯವಚನವೆನಿಸುತ್ತದೆ.

## 'ಪ್ರತಿಪಚ್ಛುಕ್ಲಪಕ್ಷೇ ತು' ಎಂಬ ವಾಕ್ಯ

ಬಲಿಪಾಡ್ಯನಿರ್ಣಯಕಾಲದಲ್ಲಿ 'ಪ್ರತಿಪಚ್ಛುಕ್ಲಪಕ್ಷೇ ತು' 'ಪ್ರತಿಪತ್ತು ಸಿತೇ ಪಕ್ಷೇ' ಎಂಬ ಎರಡು ವಾಕ್ಯಗಳು ಉದಾಹರಿಸಲ್ಪಟ್ಟಿವೆ. ಆ ಎರಡು ವಾಕ್ಯಗಳೂ ಶುಕ್ಲಪಕ್ಷದ ಹನ್ನೆರಡು ಪಾಡ್ಯತಿಥಿಗಳಿಗೆ ಅಮಾವಾಸ್ಯಾತಿಥಿಯ ವೇಧವೂ ಕೃಷ್ಣಪಕ್ಷದ ಹನ್ನೆರಡು ಪಾಡ್ಯತಿಥಿಗಳಿಗೆ ಬಿದಿಗೆಯ ವೇಧವೂ ಶುಭಕರವೆಂದು ಹೇಳುತ್ತವೆ. ಇವುಗಳು ಎಲ್ಲಾ ಪಾಡ್ಯತಿಥಿಗಳ ಮಧ್ಯದಲ್ಲಿ ಶುಕ್ಲಪಕ್ಷದ ಪಾಡ್ಯತಿಥಿಗಳಿಗೆ ಒಂದು ನಿರ್ಣಯವನ್ನೂ ಕೃಷ್ಣಪಕ್ಷದ ಪಾಡ್ಯತಿಥಿಗಳಿಗೆ ಇನ್ನೊಂದು ನಿರ್ಣಯವನ್ನೂ ಹೇಳುತ್ತಿರುವುದರಿಂದ ಯುಗ್ಮವಾಕ್ಯದಂತೆ ಪಾಡ್ಯತಿಥಿಗಳ ನಿರ್ಣಯವಿಷಯದಲ್ಲಿ ವಿಶೇಷವಚನಗಳೆನಿಸುತ್ತವೆ.

ಶುಕ್ಲಪಕ್ಷದ ಹನ್ನೆರಡು ಪಾಡ್ಯತಿಥಿಗಳಿಗೆ ಸಾಧಾರಣವಾಗಿ ಒಂದೇ ವಿಧವಾದ ನಿರ್ಣಯವನ್ನು ತಿಳಿಸುತ್ತವೆ. ಆದ್ದರಿಂದ ಶುಕ್ಲಪಕ್ಷದ ಪಾಡ್ಯತಿಥಿಗಳ ನಿರ್ಣಯವಿಷಯದಲ್ಲಿ ಸಾಮಾನ್ಯವಚನಗಳೆನಿಸುತ್ತವೆ. ಇದೇ ರೀತಿಯಲ್ಲಿ ಕೃಷ್ಣಪಕ್ಷದ ಪಾಡ್ಯತಿಥಿಗಳ ನಿರ್ಣಯ ವಿಷಯದಲ್ಲಿಯೂ ಸಾಮಾನ್ಯವಚನಗಳೆನಿಸುತ್ತವೆ.

ಮೇಲ್ಕಂಡ ಎರಡು ವಾಕ್ಯಗಳಲ್ಲಿ ಶುಕ್ಲಪಕ್ಷದ ಪಾಡ್ಯಕ್ಕೆ ಅಮಾವಾಸ್ಯಾತಿಥಿಯ ವೇಧವು ಇರ ಬೇಕೆಂದು ಹೇಳಿದೆ. ವೇಧ ಸಾಮಾನ್ಯನಿರ್ಣಯವನ್ನು ಅನುಸರಿಸಿ ಅಮಾವಾಸ್ಯಾತಿಥಿಯು ಆರುಗಳಿಗೆ ಮತ್ತು ಅಧಿಕವಾಗಿರುವಾಗ ಎಲ್ಲಾ ಶುಕ್ಲಪಕ್ಷದ ಪಾಡ್ಯಗಳಲ್ಲಿ ಮಾಡ ಬೇಕಾದ ಎಲ್ಲಾ ಕಾರ್ಯಗಳನ್ನೂ ಅಮಾವಾಸ್ಯಾದಿನದಲ್ಲಿಯೇ ಮಾಡ ಬೇಕೆಂದು ಆ ವಾಕ್ಯಗಳಿಂದ ಸಿದ್ಧವಾಗುತ್ತದೆ. ಈ ನಿಯಮದಲ್ಲಿ ಸ್ವಲ್ಪ ಬದಲಾವಣೆಯನ್ನು ತಿಳಿಸುವುದಕ್ಕಾಗಿ ಬಲಿಪಾಡ್ಯಕ್ಕೆ ಸಂಬಂಧಿಸಿದ ನಾಲ್ಕು ವಿಶೇಷ ವಾಕ್ಯಗಳು ಹೊರಟಿವೆ.

## ಬಲಿಪಾಡ್ಯಕ್ಕೆ ಸಂಬಂಧಿಸಿದ ವಿಶೇಷವಾಕ್ಯಗಳು

'ಸಂಪ್ರಾಪ್ತೇ ಕಾರ್ತಿಕೇ ಮಾಸಿ' 'ಪ್ರತಿಪತ್ಸಮ್ಮುಖಾ ಕಾರ್ಯಾ' 'ಬಲ್ಯುತ್ಸವಂ ಚ ಪೂರ್ವೇದ್ಯುಃ' 'ಮುಖಾಯಾಃ ಪೂರ್ವವಿದ್ಧಾಯಾಃ' ಎಂಬ ನಾಲ್ಕು ವಚನಗಳು ಬಲಿಪಾಡ್ಯವನ್ನು ನಿರ್ಣಯಿಸಲು ಹೊರಟಿವೆ. ಈ ವಾಕ್ಯಗಳು ಶುಕ್ಲಪಕ್ಷದ ಹನ್ನೆರಡು ಪಾಡ್ಯಗಳಲ್ಲಿ ಒಂದಾಗಿರುವ ಬಲಿಪಾಡ್ಯವನ್ನು ನಿರ್ಣಯಿಸಲು ಹೊರಟಿರುವುದರಿಂದ ಶುಕ್ಲಪಕ್ಷದ ಪಾಡ್ಯಗಳನ್ನು ನಿರ್ಣಯಿಸುವ ಮೇಲ್ಕಂಡ ಎರಡು ಸಾಮಾನ್ಯವಾಕ್ಯಗಳಿಗೆ ವಿಶೇಷವಚನಗಳೆನಿಸುತ್ತವೆ. ಈ ವಿಷಯವನ್ನು ಗ್ರಂಥಕಾರರು 'ಬಲ್ಯುತ್ಸವೇಽಪಿ ವಿಶೇಷೋಽಭಿಹಿತಃ' ಅಂದರೆ ಬಲಿಪಾಡ್ಯದಲ್ಲಿ ಮಾಡಬೇಕಾದ ಹಬ್ಬದ ವಿಷಯದಲ್ಲಿಯೂ ಈ ಕೆಳಗಣ ವಾಕ್ಯಗಳು ವಿಶೇಷವಚನಗಳಾಗಿವೆ ಎಂದು ಹೇಳಿರುವರು.

## ಸಾಮಾನ್ಯವಚನಗಳಿಗೆ ಅವಿರುದ್ಧವಾದ ವಿಶೇಷವಚನಗಳು

'ಮಾ ಹಿಂಸ್ಯಾತ್ಸರ್ವಾ ಭೂತಾನಿ' ಎಂಬ ವಾಕ್ಯವು ಯಾವ ಪ್ರಾಣಿಯನ್ನೂ ಹಿಂಸಿಸಬಾರದೆಂದು ತಿಳಿಸುತ್ತದೆ. 'ಬ್ರಾಹ್ಮಣೋ ನ ಹಂತವ್ಯಃ' ಎಂಬ ವಾಕ್ಯವು ಬ್ರಾಹ್ಮಣನನ್ನು ಕೊಲ್ಲಬಾರದೆಂದು ತಿಳಿಸುತ್ತದೆ. ಈ ಎರಡು ವಾಕ್ಯಗಳಲ್ಲಿ ಮೊದಲನೆಯ ವಾಕ್ಯವು ಸರ್ವಪ್ರಾಣಿಗಳನ್ನೂ ಉದ್ದೇಶಿಸಿ ಹೇಳಲ್ಪಟ್ಟಿರುವುದರಿಂದ ಸಾಮಾನ್ಯವಚನವೆನಿಸುತ್ತದೆ. ಆ ಪ್ರಾಣಿಗಳಲ್ಲಿ ಏಕದೇಶವಾಗಿರುವ ಬ್ರಾಹ್ಮಣರನ್ನು ಮಾತ್ರ ಉದ್ದೇಶಿಸಿ ಹೊರಟಿರುವ ಎರಡನೆಯ ವಾಕ್ಯವು ಮೊದಲನೆಯ ವಾಕ್ಯಕ್ಕೆ ವಿಶೇಷವಾಕ್ಯವೆನಿಸುತ್ತದೆ. ಇಲ್ಲಿ ವಿಶೇಷವಾಕ್ಯಕ್ಕೆ ಮರ್ಯಾದೆಯನ್ನು ಕೊಟ್ಟು ಅದರಂತೆ ನಡೆದುಕೊಂಡರೆ ಅಂದರೆ ಬ್ರಾಹ್ಮಣನನ್ನು ಕೊಲ್ಲದಿದ್ದರೆ ಸಾಮಾನ್ಯವಚನದಲ್ಲಿ ಹೇಳಿದಂತೆ ನಡೆದುಕೊಂಡಂತೆಯೂ ಆಗುತ್ತದೆ. ಆದ್ದರಿಂದ ಈ ಉದಾಹರಣದಲ್ಲಿ ಸಾಮಾನ್ಯವಚನಕ್ಕೂ ವಿಶೇಷವಚನಕ್ಕೂ ವಿರೋಧವಿಲ್ಲ.

ಬಲಿಪಾಡ್ಯವಿಷಯದಲ್ಲಿಯೂ ಇದೇ ರೀತಿಯಾಗಿದೆ. ಪಾಡ್ಯತಿಥಿಗೆ ಅಮಾವಾಸ್ಯಾವೇಧವುಳ್ಳ ದಿನದಲ್ಲಿ ಬಲಿಪಾಡ್ಯವನ್ನು ಅನುಷ್ಠಾನ ಮಾಡಿದರೆ

ಶುಕ್ಲಪಕ್ಷದ ಪಾಡ್ಯಗಳ ವಿಷಯದಲ್ಲಿ ಸಾಮಾನ್ಯವಚನವಾಗಿರುವ ಯುಗ್ಮ ವಾಕ್ಯ ಮತ್ತು 'ಪ್ರತಿಪತ್ತು ಸಿತೇ ಪಕ್ಷೇ' ಎಂಬ ಎರಡು ವಾಕ್ಯಗಳಲ್ಲಿ ಹೇಳಿದಂತೆ ನಡೆದುಕೊಂಡಂತೆಯೂ ಆಗುತ್ತದೆ. 'ಬಲ್ಯುತ್ಸವಸ್ತು' ಮುಂತಾದ ನಾಲ್ಕು ಶುಕ್ಲಪಾಡ್ಯಗಳ ವಿಶೇಷವಚನಗಳಲ್ಲಿ ಹೇಳಿದಂತೆ ನಡೆದುಕೊಂಡಂತೆಯೂ ಆಗುತ್ತದೆ. ಆದ್ದರಿಂದ ಈ ಸಾಮಾನ್ಯವಾಕ್ಯಗಳಿಗೂ ವಿಶೇಷವಾಕ್ಯಗಳಿಗೂ ವಿರೋಧವಿಲ್ಲ.

## ಅವಿರುದ್ಧವಾದ ಸಾಮಾನ್ಯವಿಶೇಷವಚನಗಳನ್ನು ಪ್ರಮಾಣವಾಗಿ ಉದಾಹರಿಸ ಬಹುದೇ?

ಆದ್ದರಿಂದ ಬಲಿಪಾಡ್ಯನಿರ್ಣಯದ ವಿಷಯದಲ್ಲಿ ವಿಶೇಷವಚನಗಳನ್ನು ಪ್ರಮಾಣವಾಗಿ ಉದಾಹರಿಸಿದಂತೆ ಆ ವಾಕ್ಯಕ್ಕೆ ಅವಿರುದ್ಧವಾಗಿರುವ ಸಾಮಾನ್ಯವಚನಗಳನ್ನೂ ಪ್ರಮಾಣವಾಗಿ ಉದಾಹರಿಸುವುದು ತಪ್ಪಾಗ ಲಾರದು. ಅದು ಮಾತ್ರವಲ್ಲ. ಸಾಮಾನ್ಯವಚನಗಳೂ ವಿಶೇಷವಚನಗಳೂ ಒಂದೇ ಅರ್ಥವನ್ನು ತಿಳಿಸುತ್ತಿರುವುದರಿಂದ ಈ ಎರಡು ಪ್ರಮಾಣಗಳಿಂದ ಸಿದ್ಧವಾದ ಬಲಿಪಾಡ್ಯನಿರ್ಣಯವು ಅತಿದೃಢವಾಗುತ್ತದೆ. ಲೋಕವ್ಯವ ಹಾರದಲ್ಲಿಯೂ ಇದೇ ನ್ಯಾಯವು ಪ್ರಸಿದ್ಧವಾಗಿದೆ ಎಂಬ ವಿಷಯವು ಗಮನಾರ್ಹ.

ನವರಾತ್ರಿ ನಿರ್ಣಯದ ಬಗ್ಗೆ ಆಗ್ರಹವೇ? (ಪುಟ 2) ವಿಶೇಷ ವಾಕ್ಯವು ಪ್ರವೃತ್ತವಾಗದಿರುವಾಗ ಮಾತ್ರ ಸಾಮಾನ್ಯವಾಕ್ಯವು ಪ್ರವೃತ್ತವಾಗುತ್ತದೆ..... ಯುಗ್ಮವಾಕ್ಯವು ಸಾಮಾನ್ಯಪಾಡ್ಯಗಳಿಗೆ ಸಂಬಂಧಪಟ್ಟುದೇ ಹೊರತು ನವರಾತ್ರಿಪಾಡ್ಯಕ್ಕೆ ಅನ್ವಯಿಸುವುದಿಲ್ಲ —ಸಾಮಾನ್ಯವಾಕ್ಯಗಳನ್ನಿಟ್ಟುಕೊಂಡು ಕೋಲಾಹಲವನ್ನು ನಡೆಯಿ ಸಿರುವುದು ಧರ್ಮಶಾಸ್ತ್ರವನ್ನರಿಯದ ಸಜ್ಜನರನ್ನು ತಪ್ಪು ದಾರಿಗೆ ಎಳೆದಂತಾಗಲಿಲ್ಲವೇ? ಇದು ರಿತ್ತಿಯವರ ಅಪೂರ್ವವಿಮರ್ಶೆ ಎಂಬ ವಿಷಯವು ಗಮನಾರ್ಹ.

ಪ್ರಕೃತದಲ್ಲಿ ಸಾಮಾನ್ಯವಚನಗಳಿಗೂ ವಿಶೇಷವಚನಗಳಿಗೂ ವಿರೋಧ ವಿಲ್ಲ ಎಂಬ ವಿಷಯವನ್ನು ವಿಮರ್ಶಿಸಿದ್ದೇನೆ. ವಿರೋಧವಿಲ್ಲದಿರುವಾಗ ಎರಡು ವಚನಗಳನ್ನೂ ಉದಾಹರಿಸುವುದರಿಂದ ನಿರ್ಣಯವು ದೃಢವಾಗುತ್ತದೆ ಎಂಬ ವಿಷಯವನ್ನೂ ಸಮರ್ಥಿಸಿದ್ದೇನೆ. 'ಯತೋವಾ ಇಮಾನಿ ಭೂತಾನಿ ಜಾಯಂತೇ' ಎಂಬ ಸಾಮಾನ್ಯವಚನದಿಂದ ಸಿದ್ಧವಾಗಿರುವ ಜಗತ್ಕಾರಣತ್ವ ವನ್ನೇ ವಿಶೇಷವಚನಗಳಿಂದ ಬ್ರಹ್ಮಸೂತ್ರಗಳಲ್ಲಿ ದೃಢಪಡಿಸಿರುವುದನ್ನು ಪ್ರಾಮಾಣಿಕರೆಲ್ಲರೂ ಅಂಗೀಕರಿಸಿರುವರು. ಹೀಗಿರುವಾಗ ದೀಪಾವಳೀ ಹಬ್ಬದ ವಿಷಯದಲ್ಲಿ ವಿಶೇಷವಚನಕ್ಕೆ ಅವಿರುದ್ಧವಾಗಿರುವ ಸಾಮಾನ್ಯ ವಚನವಾಗಿರುವ ಯುಗ್ಮವಾಕ್ಯವನ್ನು ಉದಾಹರಿಸಿರುವುದು ತಪ್ಪೆಂದು ಹೇಳುವ ರೀತಿಯವರಿಗೆ ಧರ್ಮಶಾಸ್ತ್ರ ಮಾತ್ರವಲ್ಲ ಯಾವ ಶಾಸ್ತ್ರದ ಪರಿ ಜ್ಞಾನವೂ ಇಲ್ಲ. ಲೋಕವ್ಯವಹಾರದ ಪರಿಜ್ಞಾನವೂ ಇಲ್ಲ ಎಂಬ ವಿಷಯವು ಗಮನಾರ್ಹ.

## ಹಿಂದಿನ ನಿರ್ಣಯಗಳ ಸಾರ

ಮೇಲ್ಕಂಡ ವಿವರಣದಿಂದ ಸಾಮಾನ್ಯಶುಕ್ಲಪಕ್ಷದ ಪಾಡ್ಯಗಳು ಅಮಾ ವಾಸ್ಯಾದಿನದಲ್ಲಿ ಆರು ಗಳಿಗೆಗಳ ಅನಂತರದಲ್ಲಿ ಆರಂಭವಾದರೆ ಅಂದೇ ಶುಕ್ಲ ಪಕ್ಷದ ಪಾಡ್ಯದಲ್ಲಿ ಮಾಡಬೇಕಾದ ಎಲ್ಲಾ ಕಾರ್ಯಗಳನ್ನೂ ಮಾಡಬೇಕು. ಈ ನಿರ್ಣಯವು ಯುಗ್ಮವಾಕ್ಯ ಮುಂತಾದ ವಚನಗಳಿಂದ ಸಿದ್ಧವಾಯಿತು. ಅಮಾವಾಸ್ಯೆಯು 24 ಗಳಿಗೆಗಳು ಅಥವಾ ಅವುಗಳಿಗಿಂತ ಕಡಿಮೆಯಾಗಿರು ವಾಗ ಬಲಿಪಾಡ್ಯವನ್ನು ಅಮಾವಾಸ್ಯಾದಿನದಲ್ಲಿಯೇ ಮಾಡಬೇಕು ಈ ನಿರ್ಣಯವು 'ಬಲ್ಯುತ್ಸವೇ ತು' ಮುಂತಾದ ವಿಶೇಷವಚನಗಳಿಂದ ಸಿದ್ಧ ವಾಯಿತು.

## ಸ್ಮೃತಿಮುಕ್ತಾವಲಿಯಲ್ಲಿ ಉದಾಹರಿಸಿರುವ ವಾಕ್ಯಗಳ ಸ್ಥಾನ

ಯುಗ್ಮವಾಕ್ಯದಲ್ಲಿ ಅಮಾವಾಸ್ಯಾಯುಕ್ತವಾದ ಪಾಡ್ಯದಲ್ಲಿ ಹಬ್ಬ ವನ್ನು ಮಾಡಿದರೆ ಮಹಾಫಲವು ಬರುವುದಾಗಿ ಹೇಳಿದೆ. ಬಿದಿಗೆ ಯುಕ್ತ

ವಾದ ಪಾಡ್ಯದಲ್ಲಿ ಮಾಡಿದರೆ ಮಹಾದೋಷವು ಬರುವುದಾಗಿಯೂ ಹಿಂದೆ ಮಾಡಿದ ಎಲ್ಲಾ ಪುಣ್ಯವೂ ನಶಿಸುವುದಾಗಿಯೂ ಹೇಳಿದೆ. ಈ ಯುಗ್ಮ ವಾಕ್ಯವು ಎಲ್ಲಾ ಧರ್ಮಶಾಸ್ತ್ರಕಾರರಿಗೂ ಸಂಮತವೆಂದೂ ಅವರೆಲ್ಲರೂ ಇದೇ ಅರ್ಥವನ್ನೇ ಹೇಳಿರುವರೆಂದೂ ಹಿಂದೆ ತಿಳಿಸಿದ್ದೇನೆ. ಈ ವಿಷಯವು ಗಮನಾರ್ಹ.

ರಿತ್ತಿಯವರು ಉದಾಹರಿಸಿರುವ ದೇವೀಪುರಾಣವಚನದಲ್ಲಿ ಅಮಾಯುಕ್ತವಾದ ಪಾಡ್ಯದಲ್ಲಿ ನವರಾತ್ರಿಯನ್ನು ಆರಂಭಿಸಿದರೆ ಜ್ಯೇಷ್ಠಪುತ್ರನಾಶ ಸಂಪತ್ತಿನ ನಾಶ ಎಂಬ ಎರಡು ಫಲಗಳು ಹೇಳಲ್ಪಟ್ಟಿವೆ ಎಂಬ ವಿಷಯವು ಗಮನಾರ್ಹ.

ಮೇಲ್ಕಂಡ ಎರಡುವಾಕ್ಯಗಳಲ್ಲಿ ಯುಗ್ಮವಾಕ್ಯದಲ್ಲಿ ಹೇಳಿರುವ ಮಹಾದೋಷ ಮತ್ತು ಸಕಲಪುಣ್ಯನಾಶಕ್ಕಿಂತ ದೇವೀಪುರಾಣವಾಕ್ಯದಲ್ಲಿ ಹೇಳಿರುವ ಜ್ಯೇಷ್ಠಪುತ್ರನಾಶ ಮತ್ತು ಸಂಪತ್ತಿನ ನಾಶವು ದೊಡ್ಡ ಅನಿಷ್ಟವಲ್ಲ. ಆದ್ದರಿಂದ ಅಲ್ಪಾನರ್ಥವನ್ನು ತಿಳಿಸುವ ದೇವೀಪುರಾಣವಾಕ್ಯಕ್ಕಿಂತ ಪ್ರಬಲಾನಿಷ್ಟವನ್ನು ತಿಳಿಸುವ ಯುಗ್ಮವಾಕ್ಯವು ಅತಿಪ್ರಬಲವೆನಿಸುತ್ತದೆ ಎಂಬ ವಿಷಯವು ಗಮನಾರ್ಹ.

'ಮುಖ್ಯಾಯಾಃ ಪೂರ್ವವಿದ್ಧಾಯಾಃ' ಎಂಬ ವಿಶೇಷವಾಕ್ಯವು ಅಮಾವಾಸ್ಯಾಸಂಬಂಧವುಳ್ಳ ಪಾಡ್ಯವು ಸಿಗದಿರುವಾಗ ಮರುದಿನದಲ್ಲಿ ಬಲಿಪಾಡ್ಯವನ್ನು ಅನುಷ್ಠಿಸ ಬೇಕೆಂದೂ ಸಿಕ್ಕಿದಾಗ ಮರುದಿನದಲ್ಲಿ ಪಾಡ್ಯವು ಆರು ಗಳಿಗೆ ಅಥವಾ ಅದಕ್ಕಿಂತ ಅಧಿಕವಾಗಿದ್ದರೂ ಮರುದಿನದಲ್ಲಿ ಮಾಡಕೂಡದೆಂದೂ ಅತಿಸ್ಪಷ್ಟವಾಗಿ ಹೇಳುತ್ತಿದೆ. ಈ ವಾಕ್ಯಕ್ಕೆ ಬೇರೆ ಅರ್ಥವನ್ನು ಹೇಳಲು ಯಾರಿಂದಲೂ ಸಾಧ್ಯವಿಲ್ಲ. ರಿತ್ತಿಯವರೂ ಹೇಳಿಲ್ಲ. ಆದ್ದರಿಂದ ನಿರವಕಾಶವಾದ ಈ ವಾಕ್ಯವು ಅತಿಪ್ರಬಲವಾಗುವುದು ಎಂಬ ವಿಷಯವು ಗಮನಾರ್ಹ.

ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಈ ವಾಕ್ಯಕ್ಕೆ ವಿರುದ್ಧವಾಗಿರುವ ವಾಕ್ಯಗಳು ಉದಾಹರಿಸಲ್ಪಟ್ಟಿದ್ದರೆ ಆ ವಾಕ್ಯಗಳಿಗೆ 'ಮುಖ್ಯಾಯಾಃ' ಎಂಬ ವಾಕ್ಯಕ್ಕೆ ವಿರುದ್ಧವಲ್ಲದ ಅರ್ಥವನ್ನು ಹೇಳಲು ಸಾಧ್ಯವಿದೆಯೇ? ಇಲ್ಲವೇ?

ಎಂಬ ವಿಷಯವನ್ನು ಮೊದಲು ವಿಮರ್ಶಿಸ ಬೇಕು. ಹಾಗೆ ಸಾಧ್ಯವಿದ್ದರೆ ಸಾವಕಾಶವಾಗಿರುವ ಆ ವಾಕ್ಯಗಳು ದುರ್ಬಲವೆಂದೂ ನಿರವಕಾಶವಾಗಿರುವ 'ಮುಖ್ಯಾಯಾಃ' ಎಂಬ ವಾಕ್ಯವು ಪ್ರಬಲವೆಂದೂ ತೀರ್ಮಾನಿಸ ಬೇಕು. ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಉದಾಹರಿಸಿರುವ ದುರ್ಬಲವಾದ ಆ ವಾಕ್ಯಗಳಿಗೆ ಪ್ರಬಲವಾಗಿರುವ 'ಮುಖ್ಯಾಯಾಃ' ಎಂಬ ವಾಕ್ಯಕ್ಕೆ ವಿರುದ್ಧವಲ್ಲದ ಬೇರೆ ಅರ್ಥವನ್ನು ಹೇಳಿ ಎರಡು ವಾಕ್ಯಗಳ ಪ್ರಾಮಾಣ್ಯ ವನ್ನೂ ರಕ್ಷಿಸ ಬೇಕು. ಇದು **ಮೊದಲನೆಯ ಮಾರ್ಗ.**

ಎರಡು ವಾಕ್ಯಗಳೂ ನಿರವಕಾಶವಾಗಿದ್ದರೆ ಎರಡುವಾಕ್ಯಗಳೂ ಸಮ ಬಲವೆಂದು ತಿಳಿಯ ಬೇಕು. ಆಗ ಎರಡುವಾಕ್ಯಗಳಲ್ಲಿ ಹೇಳಿರುವ ಅರ್ಥ ವನ್ನೂ ವಿಕಲ್ಪವಾಗಿ ಅಂಗೀಕರಿಸ ಬೇಕು. ಅಂದರೆ ಹಬ್ಬವನ್ನು 'ಮುಖ್ಯಾಯಾಃ' ಎಂಬ ಮಾತಿನಲ್ಲಿ ಹೇಳಿದಂತೆ ಅಮಾವಾಸ್ಯಾದಿನದಲ್ಲಿ ಮಾಡಿದರೂ ತಪ್ಪಿಲ್ಲ. ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಉದಾಹರಿ ಸಿರುವ ಪ್ರಮಾಣಗಳಲ್ಲಿ ಹೇಳಿದಂತೆ ಮರುದಿನದಲ್ಲಿ ಮಾಡಿದರೂ ತಪ್ಪಿಲ್ಲ ಎಂದು ಹೇಳ ಬೇಕು. ಸಮಬಲವಾಗಿರುವ 'ಉದಿತೇ ಹೋತವ್ಯಂ' 'ಅನು ದಿತೇ ಹೋತವ್ಯಂ' ಎಂಬ ಎರಡು ವಾಕ್ಯಗಳಲ್ಲಿ ಸಕಲಶಾಸ್ತ್ರಕಾರರೂ ಇದೇ ಕ್ರಮವನ್ನು ಅನುಸರಿಸಿರುವುದನ್ನು ಶಾಸ್ತ್ರಜ್ಞರು ಬಲ್ಲರು. ಈ ವಿಷಯವು ಶಾಸ್ತ್ರಗಂಧವೇ ಇಲ್ಲದ ರಿತ್ತಿಯವರಿಗೆ ಹೇಗೆ ತಿಳಿಯಲು ಸಾಧ್ಯ? ಇದು **ಎರಡನೆಯ ಮಾರ್ಗ.**

'ಮುಖ್ಯಾಯಾಃ' ಎಂಬ ವಾಕ್ಯವು ರಿತ್ತಿಯವರಿಗೆ ಸಂಮತವಾಗಿರುವ ವಾಕ್ಯಗಳಿಗಿಂತ ದುರ್ಬಲವಾಗಿದ್ದರೆ ರಿತ್ತಿಯವರು ಹೇಳಿದಂತೆ ಅಮಾವಾಸ್ಯಾ ಯುಕ್ತವಾದ ಪಾಡ್ಯದಲ್ಲಿ ಹಬ್ಬವನ್ನು ಮಾಡುವುದು ತಪ್ಪಾಗ ಬಹುದು. ಆದಕ್ಕಾಗಿ ರಿತ್ತಿಯವರು 'ಮುಖ್ಯಾಯಾಃ' ಎಂಬ ವಾಕ್ಯವು ಅವರಿಗೆ ಸಂಮತವಾದ ವಾಕ್ಯಕ್ಕಿಂತ ದುರ್ಬಲ ಎಂಬ ಅಂಶವನ್ನು ಸಮರ್ಥಿಸ ಬೇಕು. **ಇದು ಮೂರನೆಯ ಮಾರ್ಗ.** ರಿತ್ತಿಯವರು ಈ ಮಾರ್ಗವನ್ನು ಹಿಡಿಯ ಲಿಲ್ಲ. ಹಿಡಿಯುವುದಕ್ಕೆ ಅವರಿಂದ ಸಾಧ್ಯವೂ ಇಲ್ಲ ಎಂಬ ಅಂಶವು **ಗಮನಾರ್ಹ.**

ಆದ್ದರಿಂದ ಸ್ಮೃತಿಮುಕ್ತಾವಲಿಯಲ್ಲಿ ಉದಾಹರಿಸಿರುವ ವಾಕ್ಯಗಳು ನಿರವಕಾಶ ಮತ್ತು ರಿತ್ತಿಯವರಿಗೆ ಸಮ್ಮತವಾದ ವಾಕ್ಯಗಳು ಸಾವಕಾಶ ಎಂದು ಅಂಗೀಕರಿಸಿ ಸ್ಮೃತಿಮುಕ್ತಾವಲೀಕಾರರ ನಿರ್ಣಯವನ್ನು ಅಂಗೀಕರಿಸಿ ರಿತ್ತಿಯವರಿಗೆ ಸಂಮತವಾದ ನಿರ್ಣಯಕ್ಕೆ ತಿಲತರ್ಪಣವನ್ನು ಕೊಡುವುದು ಅಥವಾ ಎರಡು ವಾಕ್ಯಗಳಿಗೂ ಪ್ರಾಮಾಣ್ಯವನ್ನು ಹೇಳಿ ಈ ನಿರ್ಣಯವನ್ನೂ ಇದಕ್ಕೆ ವಿರುದ್ಧವಾದ ನಿರ್ಣಯವನ್ನೂ ಎರಡನ್ನೂ ವಿಕಲ್ಪದಿಂದ ಅಂಗೀಕರಿಸುವುದು ಇದು ಎರಡೇ ಮಾರ್ಗಗಳು ಈಗ ಸಾಧ್ಯವಾಗಿವೆ.

ರಿತ್ತಿಯವರಿಗೆ ಸಂಮತವಾದ ಪ್ರಮಾಣದಂತೆ ನಡೆದುಕೊಂಡು ಸ್ಮೃತಿಮುಕ್ತಾವಲೀಕಾರರ ಸಿದ್ಧಾಂತವನ್ನು ಬಿಡುವುದೆಂಬ ಮೂರನೆಯ ಮಾರ್ಗವು ಸರ್ವಥಾ ಅಸಾಧ್ಯ ಎಂಬ ವಿಷಯವು ಗಮನಾರ್ಹ.

ವಿಕಲ್ಪಸ್ಥಳದಲ್ಲಿಯೂ ಪರಸ್ಪರವಿರುದ್ಧವಾದ **ಉದಿತಹೋಮ** ಅಂದರೆ ಸೂರ್ಯೋದಯಾನಂತರದಲ್ಲಿ ಮಾಡುವ ಹೋಮ **ಅನುದಿತ ಹೋಮ** ಅಂದರೆ ಸೂರ್ಯೋದಯವಾಗುವುದಕ್ಕಿಂತ ಪೂರ್ವದಲ್ಲಿ ಮಾಡುವ ಹೋಮ ಈ ಎರಡು ಹೋಮಗಳನ್ನೂ ಒಂದೇ ಅಧಿಕಾರಿಯು ಮಾಡಲಿಕ್ಕೆ ಸಾಧ್ಯವಿಲ್ಲ. ಬೇರೆ ಬೇರೆ ಅಧಿಕಾರಿಯು ಮಾಡಬೇಕು. ಈ ಸಿದ್ಧಾಂತವು ಮೀಮಾಂಸಾಶಾಸ್ತ್ರದಲ್ಲಿ ನಿರ್ಣೀತವಾಗಿದೆ,

ಅದರಂತೆ ಪರಸ್ಪರವಿರುದ್ಧವಾದ ಅಮಾವಾಸ್ಯಾಯುಕ್ತವಾದ ಪಾಡ್ಯದಲ್ಲಿ ಹಬ್ಬ ಮರುದಿನದಲ್ಲಿ ಹಬ್ಬ ಇವೆರಡನ್ನು ಒಂದೇ ಅಧಿಕಾರಿಯು ಮಾಡಲು ಸಾಧ್ಯವಿಲ್ಲ. ಆದ್ದರಿಂದ ಧರ್ಮಸಿಂಧುಭಕ್ತರಾದ ರಿತ್ತಿಯವರು ಮರುದಿನದಲ್ಲೂ ಸ್ಮೃತಿಮುಕ್ತಾವಲೀಭಕ್ತರು ಅಮಾವಾಸ್ಯಾದಿನದಲ್ಲಿಯೂ ಹಬ್ಬವನ್ನು ಮಾಡುವುದರಲ್ಲಿ ಯಾವ ತಪ್ಪೂ ಇಲ್ಲವೆಂದು ಹೇಳಬಹುದು. ಆದರೆ ಸ್ಮೃತಿಮುಕ್ತಾವಲೀಭಕ್ತರು ಮಾಡುತ್ತಿರುವ ಅನುಷ್ಠಾನವು ತಪ್ಪೆಂದು ರಿತ್ತಿಯವರು ಹೇಳಿದರೆ ಅವರಿಗೆ ಶಾಸ್ತ್ರಜ್ಞಾನವಿಲ್ಲವೆಂಬ ಅಂಶವು ಊರ್ಜಿತವಾಗುತ್ತದೆ ಇದು ಗಮನಾರ್ಹ.

ಎರಡುವಾಕ್ಯಗಳೂ ಸಮಬಲವಾಗಿದ್ದರೆ ಮೇಲ್ಕಂಡ ವಿಕಲ್ಪ. ವಸ್ತುಸ್ಥಿತಿಯಲ್ಲಿ ನಿರವಕಾಶವಾದ 'ಮುಖ್ಯಾಯಾಃ' ಎಂಬ ವಾಕ್ಯವೇ ಪ್ರಬಲ.

ಆದ್ದರಿಂದ ಅಮಾವಾಸ್ಯಾಯುಕ್ತವಾದ ಪಾಡ್ಯದಿನದಲ್ಲಿಯೇ ಬಲಿಪಾಡ್ಯದಲ್ಲಿ ಮಾಡ ಬೇಕಾದ ಹಬ್ಬವನ್ನು ಮಾಡ ಬೇಕು. ಬಿದಿಗೆಯಿಂದ ಯುಕ್ತವಾದ ಪಾಡ್ಯದಲ್ಲಿ ಮಾಡಿದವರಿಗೆ ಹಿಂದೆ ಹೇಳಿದ ಎಲ್ಲಾ ದೋಷವೂ ಬರುತ್ತದೆ. ಸಕಲ ಪುಣ್ಯಗಳೂ ನಶಿಸುತ್ತವೆ. ಇದು ಗಮನಾರ್ಹ.

## ಸ್ಮೃತಿಮುಕ್ತಾವಲಿಯಲ್ಲಿ ಬಲಿಪಾಡ್ಯದಲ್ಲಿ ಉಪವಾಸವು ನಿರ್ಣಯಿಸಲ್ಪಟ್ಟಿಲ್ಲ

ಸ್ಮೃತಿಮುಕ್ತಾವಲೀಗ್ರಂಥದಲ್ಲಿ ಉದಾಹರಿಸಿರುವ ಎಲ್ಲಾ ವಾಕ್ಯಗಳಿಗೂ ಅರ್ಥವನ್ನು ಗ್ರಂಥಕಾರರೇ ಬರೆದಿರುವರು. ಆ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಯಾರಿಂದಲೂ ಹೇಳಲು ಸಾಧ್ಯವಿಲ್ಲ. ರಿತ್ತಿಯವರೂ ಹೇಳಲಿಲ್ಲ. ಆದ್ದರಿಂದ ಆ ವಾಕ್ಯಗಳೆಲ್ಲವೂ ನಿರವಕಾಶವಾಕ್ಯಗಳೆಂಬ ವಿಷಯವು ಗಮನಾರ್ಹ.

ನವರಾತ್ರನಿರ್ಣಯದ ಬಗ್ಗೆ ಆಗ್ರಹವೇ? (ಪುಟ 12) ''ಸ್ಮೃತಿ ಮುಕ್ತಾವಲೀಕಾರರು ದೀಪಾವಳೀಪಾಡ್ಯದಲ್ಲಿಯೂ ಉಪವಾಸನಿರ್ಣಯವನ್ನು ಮಾಡಿರುವರು.'' ಇದು ರಿತ್ತಿಯವರ ಅಶರೀರವಾಣಿಯೆಂಬುದು ಗಮನಾರ್ಹ.

ಸ್ಮೃತಿಮುಕ್ತಾವಲೀಕಾರರು ಈ ನಿರ್ಣಯವನ್ನು ಬರೆಯುವಾಗ ತಮ್ಮ ಸ್ವಂತ ವಾಕ್ಯಗಳಲ್ಲಿಯೂ ಬಲ್ಯುತ್ಸವ ಎಂದು ಹೇಳಿರುವರು. ಅವರು ಉದಾಹರಿಸಿರುವ ಒಂದೊಂದು ಪ್ರಮಾಣವಚನಗಳಲ್ಲಿಯೂ ಬಲ್ಯುತ್ಸವ ಎಂದು ಹೇಳಿರುತ್ತದೆ. ಅವರು ಉದಾಹರಿಸಿರುವ ವರಾಹಪುರಾಣವಚನದಲ್ಲಿ ಬಲ್ಯುತ್ಸವವು ವರ್ಣಿಸಲ್ಪಟ್ಟಿದೆ. ಅಭ್ಯಂಗ ದಾನ ಮುಂತಾದ ಎಲ್ಲಾ ವಿಷಯಗಳೂ ಈ ಉತ್ಸವದಲ್ಲಿ ಅಡಗಿರುವುದಾಗಿ ಹೇಳಿದೆ. ಈ ಬಲ್ಯುತ್ಸವು ಉಪವಾಸವೇ? ಉಪವಾಸದ ಶಬ್ದವನ್ನೂ ಅವರು ಉಚ್ಚರಿಸಲಿಲ್ಲ.

ಉಪವಾಸವ್ರತಕ್ಕೆ ವಿರುದ್ಧವಾಗಿರುವ ತೈಲಾಭ್ಯಂಗವನ್ನು ಮಾಡಬೇಕೆಂದು ಪುರಾಣದ ಆಧಾರದಿಂದ ಸಮರ್ಥಿಸಿದ್ದಾರೆ. ವೃದ್ಧಗರ್ಗವಚನವನ್ನು ಉದಾಹರಿಸಿ 'ದ್ಯೂತಾದೀನಿ' ಎಂಬ ಪದದಿಂದ ಜೂಜು

ಮುಂತಾದವುಗಳನ್ನು ಬಲಿಪಾಡ್ಯದಲ್ಲಿ ಮಾಡ ಬೇಕೆಂದು ತಿಳಿಸಿರುತ್ತಾರೆ. ಹೀಗೆ ಉಪವಾಸದ ಪ್ರಸಕ್ತಿಯನ್ನೇ ಇಟ್ಟುಕೊಳ್ಳದೆ ಉಪವಾಸಕ್ಕೆ ವಿರುದ್ಧ ವಾಗಿರುವ ತೈಲಾಭ್ಯಂಗ ದ್ಯೂತ ಮುಂತಾದವುಗಳನ್ನು ಬಲಿಪಾಡ್ಯದಲ್ಲಿ ಮಾಡ ಬೇಕೆಂದು ಹೇಳುತ್ತಾ ಆ ಬಲಿಪಾಡ್ಯವನ್ನು ಅಮಾವಾಸ್ಯಾಯುಕ್ತ ವಾದ ಪಾಡ್ಯದಿನದಲ್ಲಿಯೇ ಅನುಷ್ಠಿಸ ಬೇಕೆಂದು ಸ್ಮೃತಿಮುಕ್ತಾವಲೀ ಕಾರರು ಸಮರ್ಥಿಸಿರುತ್ತಾರೆ ಎಂಬ ವಿಷಯವು ಗಮನಾರ್ಹ.

ಇದರಿಂದ ಸ್ಮೃತಿಮುಕ್ತಾವಲೀಗ್ರಂಥಕಾರರು ಬಲಿಪಾಡ್ಯದಲ್ಲಿ ಮಾಡ ಬೇಕಾದ ಹಬ್ಬವನ್ನು ನಿರ್ಣಯಿಸಿರುತ್ತಾರೆ. ಉಪವಾಸವನ್ನು ನಿರ್ಣಯಿಸ ಲಿಲ್ಲ ಎಂಬ ವಿಷಯವು ಗಮನಾರ್ಹ.

ಈ ಸ್ಮೃತಿಮುಕ್ತಾವಲೀಕಾರರು ಹೇಳದಿರುವ ಮತ್ತು ಅವರಿಂದ ನಿರಾಕರಿಸಲ್ಪಟ್ಟಿರುವ ವಿಷಯವನ್ನು ಅವರು ಹೇಳಿದಂತೆ ರಿತ್ತಿಯವರು ಸುಳ್ಳು ಹೇಳುತ್ತಿರುವುದು ಗಮನಾರ್ಹ.

## ದೀಪಾವಳಿಅಮಾವಾಸ್ಯಾದಿನದಲ್ಲಿ ಅಭ್ಯಂಗವನ್ನು ಮಾಡಬೇಕು (ರಿತ್ತಿಯವರು)

**ನವರಾತ್ರಿನಿರ್ಣಯದ ಬಗ್ಗೆ ಆಗ್ರಹವೇ? (ಪುಟ 13)** "ಯುಗಾದಿ ದೀಪಾವಳೀ ಮುಂತಾದ ಹಬ್ಬಗಳಲ್ಲಿ ಪಾಡ್ಯದ ಬೆಳಿಗ್ಗೆ ಅಭ್ಯಂಗಸ್ನಾನವನ್ನು ಮಾಡ ಬೇಕೆಂದಿದೆ. ಈ ಸ್ನಾನವನ್ನು ಪಾಡ್ಯದಲ್ಲಿಯೇ ಆಚರಿಸಬೇಕು. ಅಮಾವಾಸ್ಯೆಯಲ್ಲಿ ತೈಲಸ್ನಾನವು ನಿಷಿದ್ಧವಾಗಿದೆ." ಇದು ರಿತ್ತಿಯವರ ಆಕಾಶವಾಣಿಯೆಂಬುದು ಗಮನಾರ್ಹ.

ಇದೇ ರಿತ್ತಿಯವರು ಮರುದಿನದಲ್ಲಿ ಪಾಡ್ಯವು ಸ್ವಲ್ಪವೂ ಇಲ್ಲದಿದ್ದರೆ ಅಮಾವಾಸ್ಯಾದಿನದಲ್ಲಿಯೇ ಹಬ್ಬವನ್ನು ಮಾಡ ಬೇಕೆಂದು ಹೇಳಿರುತ್ತಾರೆ. ಆಗ ಮಾತ್ರ ಅಮಾವಾಸ್ಯಾದಿನದಲ್ಲಿಯೇ ಅಭ್ಯಂಗವನ್ನು ಮಾಡ ಬಹುದೇ? ಆಗ ಮಾಡ ಬಹುದಾದರೆ ಈಗ ಯಾಕೆ ಮಾಡ ಬಾರದು? ಈ ಪ್ರಶ್ನೆಗೆ ಉತ್ತರವನ್ನು ಕೊಡುವರೇ?

## ದೀಪಾವಳಿ ಅಮಾವಾಸ್ಯಾದಿನದಲ್ಲಿ ಅಭ್ಯಂಗವನ್ನು ಮಾಡಬೇಕು (ಧರ್ಮಸಿಂಧು)

ರಿತ್ತಿಯವರು ಧರ್ಮಸಿಂಧುಗ್ರಂಥವನ್ನು ಪರಮಪವಿತ್ರಗ್ರಂಥವೆಂದು ಹೇಳಿರುವರು. ಆ ಗ್ರಂಥದಲ್ಲಿ ಹೇಳಿರುವ ಒಂದು ವಾಕ್ಯವನ್ನು ಕೆಳಗೆ ಕೊಟ್ಟಿರುವೆನು.

(23) **ಆಶ್ವಿನಾಮಾವಾಸ್ಯಾಯಾಂ ಪ್ರಾತರಭ್ಯಂಗಃ ಪ್ರದೋಷೇ ಲಕ್ಷ್ಮೀಪೂಜನಾದಿಕಂ ವಿಹಿತಂ। ಅತ್ರ ಪ್ರಾತರಭ್ಯಂಗದೇವಪೂಜಾದಿಕಂ ಕೃತ್ವಾ ಅಪರಾಹ್ಣೇ ಪಾರ್ವಣಶ್ರಾದ್ಧಂ ಕೃತ್ವಾ ಪ್ರದೋಷಸಮಯೇ ದೀಪದಾನೋಲ್ಕಾಪ್ರದರ್ಶನಲಕ್ಷ್ಮೀಪೂಜನಾದಿ ಕೃತ್ವಾ ಭೋಜನಂ ಕಾರ್ಯಂ.**

"ಆಶ್ವಿನ ಅಮಾವಾಸ್ಯಾದಿನದಲ್ಲಿ ಬೆಳಿಗ್ಗೆ ಅಭ್ಯಂಗವೂ ಸಂಜೆ ಲಕ್ಷ್ಮೀಪೂಜೆ ಮುಂತಾದವುಗಳೂ ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿವೆ. ಬೆಳಿಗ್ಗೆ ಅಭ್ಯಂಗವನ್ನೂ ಅಪರಾಹ್ಣಕಾಲದಲ್ಲಿ ಪಾರ್ವಣಶ್ರಾದ್ಧವನ್ನೂ ಪ್ರದೋಷಕಾಲದಲ್ಲಿ ದೀಪದಾನ ಲಕ್ಷ್ಮೀಪೂಜೆ ಮುಂತಾದವುಗಳನ್ನೂ ಮಾಡಿ ಊಟ ಮಾಡಬೇಕು." ಇದು ಧರ್ಮಸಿಂಧುಕಾರರು ಹೇಳಿರುವುದು ಎಂಬ ವಿಷಯ ಗಮನಾರ್ಹ.

## ದೀಪಾವಳಿ ಅಮಾವಾಸ್ಯೆಯಲ್ಲಿ ಅಭ್ಯಂಗವನ್ನು ಮಾಡಬೇಕು (ಸ್ಮೃತಿಮುಕ್ತಾವಲೀಕಾರರು)

ಸ್ಮೃತಿಮುಕ್ತಾವಲೀಕಾರರು ಅಮಾವಾಸ್ಯಾಯುಕ್ತವಾದ ಬಲಿಪಾಡ್ಯದಿನದಲ್ಲಿ ಹಬ್ಬವನ್ನು ಮಾಡಬೇಕೆಂದು ಪ್ರಮಾಣಗಳ ಆಧಾರದಿಂದ ಸಮರ್ಥಿಸಿರುವರು. ಈ ಹಬ್ಬದಲ್ಲಿ ಅಭ್ಯಂಗವೂ ಒಂದು ಭಾಗ ಎಂಬ ಅಂಶವನ್ನು ವರಾಹಪುರಾಣವನ್ನು ಉದಾಹರಿಸಿ ಸಮರ್ಥಿಸಿರುವರು. ಹೀಗೆ ಬಲಿಪಾಡ್ಯಕ್ಕೆ ಅಮಾವಾಸ್ಯಾತಿಥಿಯ ಸಂಬಂಧವು ಏರ್ಪಟ್ಟಾಗ ಅಂದೇ ಹಬ್ಬವನ್ನು ಮಾಡಬೇಕೆಂದು ಸಮರ್ಥಿಸಿದ ಮೇಲೆ ಆ ಹಬ್ಬದ ಒಂದು ಭಾಗವಾದ ಅಭ್ಯಂಗವನ್ನು ಅಂದೇ ಮಾಡಬೇಕೆಂದು ಸಮರ್ಥಿಸಿದಂತಾಯಿತು ಎಂದು ಅವಶ್ಯವಾಗಿ ಅಂಗೀಕರಿಸಲೇ ಬೇಕು. ಆದರೆ ರಿತ್ತಿಯವರಿಗೆ

ಸ್ಮೃತಿಮುಕ್ತಾವಲೀಕಾರರಲ್ಲಿ ಭಕ್ತಿಯಿಲ್ಲ. ಅವರು ಹೇಳಿರುವ ಒಂದೊಂದು ವಿಷಯಗಳನ್ನೂ ಅವರು ಹೇಳಲಿಲ್ಲವೆಂದೂ ಹೇಳದಿರುವ ವಿಷಯಗಳನ್ನೆಲ್ಲ ವನ್ನೂ ಹೇಳಿರುವುದಾಗಿಯೂ ಕುಚೋದ್ಯವನ್ನು ಮಾಡುತ್ತಾ ಅವರನ್ನು ಗೇಲಿ ಮಾಡುತ್ತಿರುವರು. ಇರಲಿ.

ಪರಮಪ್ರಾಮಾಣಿಕರೆಂದು ಇವರು ಅಂಗೀಕರಿಸಿರುವ ಧರ್ಮಸಿಂಧು ಕಾರರು ದೀಪಾವಳೀಅಮಾವಾಸ್ಯಾದಿನದಲ್ಲಿ ಅಭ್ಯಂಗವನ್ನು ಮಾಡ ಬೇಕೆಂದು ಹೇಳಿರುವರು. ಅವರಲ್ಲಿ ಇಟ್ಟಿರುವ ಭಕ್ತಿಯಿಂದಲಾದರೂ ದೀಪಾ ವಳೀಅಮಾವಾಸ್ಯಾದಿನದಲ್ಲಿ ಅಭ್ಯಂಗ ಮಾಡುವುದು ತಪ್ಪಲ್ಲವೆಂದು ಅಂಗೀಕರಿಸುವರೇ? **ಗಮನಿಸ ಬೇಕು.**

ತಾನೇ ಅಮಾವಾಸ್ಯಾದಿನದಲ್ಲಿ ಹಬ್ಬವನ್ನು ಮಾಡ ಬೇಕೆಂದು ಹೇಳಿ ದವರು ಅದಕ್ಕೆ ಅಂಗವಾದ ತೈಲಾಭ್ಯಂಗವನ್ನು ಅಮಾವಾಸ್ಯಾದಿನದಲ್ಲಿ ತನ್ನ ಮೇಲೆ ತನಗಿರುವ ಭಕ್ತಿಯಿಂದಲಾದರೂ ಮಾಡುವರೇ? ಇಲ್ಲವೇ? **ಗಮನಿಸ ಬೇಕು.**

## ಅಮಾವಾಸ್ಯಾದಿನದಲ್ಲಿ ತೈಲಾಭ್ಯಂಗಕಾಲ

ನವರಾತ್ರಿನಿರ್ಣಯದ ಬಗ್ಗೆ ಆಗ್ರಹವೇ? (ಪುಟ 13) "ಅಮಾ ವಾಸ್ಯಾದಿನದಲ್ಲಿ ಹಬ್ಬವನ್ನು ಆಚರಿಸುವುದಾದರೆ ಈ ತೈಲಸ್ನಾನವನ್ನು ಸಾಯಂಕಾಲ ಮಾಡಬೇಕೇ? ಅಥವಾ ಅಮಾವಾಸ್ಯೆ ಇರುವ ಬೆಳಿಗ್ಗೆಯೇ ಮಾಡಬೇಕೇ?" ಇದು ರಿತ್ತಿಯವರ ಪ್ರಶ್ನೆ. ಇದು **ಗಮನಾರ್ಹ.**

ರಿತ್ತಿಯವರೇ, ಅಮಾವಾಸ್ಯಾದಿನದಲ್ಲಿ ಅಭ್ಯಂಗಮಾಡುವುದನ್ನು ನೀವು ಅಂಗೀಕರಿಸಿರುವಿರಿ. ನಿಮ್ಮ ಗುರುಗಳಾದ ಧರ್ಮಸಿಂಧುಕಾರರೂ ಅಂಗೀಕರಿಸಿರುವರು. ಆ ಸಂದರ್ಭದಲ್ಲಿ ಇದೇ ಪ್ರಶ್ನೆ ಬರುವುದಿಲ್ಲವೇ? ಅದಕ್ಕೆ ನೀವು ಹೇಳುವ ಸಮಾಧಾನವನ್ನೇ ನಾವೂ ಹೇಳುವೆವು. ಆದರೆ ನಿಮಗೆ ಉತ್ತರವು ತಿಳಿಯದು. ನಾನು ಹೇಳುವೆನು. ಕೇಳಿ.

ಅಮಾವಾಸ್ಯಾದಿನದಲ್ಲಿ ಬೆಳಿಗ್ಗೆ ಅಮಾವಾಸ್ಯೆ ಇದ್ದರೂ ಆಗಲೇ ಮಾಡ ಬೇಕು. ಬೆಳಿಗ್ಗೆ ಪಾಡ್ಯ ಇಲ್ಲದಿದ್ದರೂ ಬೆಳಿಗ್ಗೆ ಪಾಡ್ಯ ಎಂದು ಹೇಳಿ ಸಂಕಲ್ಪ

ಮಾಡ ಬೇಕು. ಈ ವಿಷಯವನ್ನು ಸ್ಮೃತಿಮುಕ್ತಾವಲೀಕಾರರು ಸಮರ್ಥಿಸಿರುವರು. ಅದನ್ನು ಈಗ ವಿವರಿಸುತ್ತೇನೆ.

(24) **ಪ್ರಾತರೇವ ಸಂಕಲ್ಪಃ ಕಾರ್ಯಃ. ಯದ್ಯಪಿ ಸಂಕಲ್ಪಕಾಲೇ ಪ್ರತಿಪದಾ ಭಾವ್ಯಂ, ತಥಾಪಿ ತದಾನೀಂ ಜ್ಯೋತಿಃಶಾಸ್ತ್ರಪ್ರಸಿದ್ಧ ಪ್ರತಿಪದಭಾವೇಽಪಿ ಸ್ಮೃತಿಷೂಪಪಾದಿತಾಯಾಃ ಪ್ರತಿಪದಃ ಸತ್ವಾತ್.**

"ಪಾಡ್ಯಮುಂತಾದ ತಿಥಿಗಳು ಎರಡು ವಿಧ (1) ಜ್ಯೋತಿಃಶಾಸ್ತ್ರದಿಂದ ಸಿದ್ಧವಾದ ಪಂಚಾಂಗದಲ್ಲಿರುವ ತಿಥಿಗಳು (2) ಅಮಾವಾಸ್ಯಾತಿಥಿಯಿಂದ ಯುಕ್ತವಾಗಿರುವ ಪಾಡ್ಯದಿನದಲ್ಲಿ ಹಬ್ಬವನ್ನು ಮಾಡಬೇಕು ಎಂದು ಧರ್ಮಶಾಸ್ತ್ರವು ವಿಧಿಸಿರುತ್ತದೆ. ಆಗ ಜ್ಯೋತಿಃಶಾಸ್ತ್ರಸಿದ್ಧವಾದ ಪಾಡ್ಯತಿಥಿಯು ಅಮಾವಾಸ್ಯಾದಿನದಲ್ಲಿ ಬೆಳಿಗ್ಗೆ ಇಲ್ಲ. ಆದರೂ ಅಂದೇ ಹಬ್ಬವನ್ನು ಮಾಡಬೇಕೆಂದು ಧರ್ಮಶಾಸ್ತ್ರವು ವಿಧಿಸಿರುವುದರಿಂದ ಆ ಹಬ್ಬವನ್ನು ಅನುಷ್ಠಿಸುವ ವಿಷಯದಲ್ಲಿ ಮಾತ್ರ ಅಮಾವಾಸ್ಯಾದಿನವೇ ಧರ್ಮಶಾಸ್ತ್ರರೀತಿಯಿಂದ ಬಲಿಪಾಡ್ಯದಿನವೆನಿಸುತ್ತದೆ. ಆದ್ದರಿಂದ ಅಮಾವಾಸ್ಯಾದಿನವು ಜ್ಯೋತಿಃಶಾಸ್ತ್ರರೀತಿಯಿಂದ ಅಮಾವಾಸ್ಯಾದಿನವಾಗಿದ್ದರೂ ಧರ್ಮಶಾಸ್ತ್ರರೀತಿಯಿಂದ ಬಲಿಪಾಡ್ಯವೇ ಆಗಿರುವುದರಿಂದ ಅಮಾವಾಸ್ಯಾದಿನದಲ್ಲಿ ಬೆಳಿಗ್ಗೆ ಪಾಡ್ಯ ಎಂದು ಹೇಳಿ ಸಂಕಲ್ಪಿಸಿ ಅಭ್ಯಂಗವನ್ನು ಮಾಡಬೇಕು." ಇದು ಸ್ಮೃತಿಮುಕ್ತಾವಲೀಕಾರರ ಸಮಾಧಾನ ಎಂಬ ವಿಷಯವು **ಗಮನಾರ್ಹ.**

ರಿತ್ತಿಯವರೇ, ಇದು ತಪ್ಪೆಂದು ನೀವು ತಿಳಿಯುವುದಾದರೆ ಈ ವಿಷಯದಲ್ಲಿ ಅಮಾವಾಸ್ಯಾದಿನದಲ್ಲಿ ಹಬ್ಬವನ್ನು ಮಾಡಬೇಕೆಂದು ಹೇಳಿರುವ ನಿಮ್ಮ ಮತ್ತು ನಿಮ್ಮ ಗುರುಗಳ ಉಪದೇಶವೇನು? **ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ.**

ಮರುದಿನದಲ್ಲಿ ಪಾಡ್ಯವು ಇಲ್ಲದಿರುವಾಗ ಅಮಾವಾಸ್ಯಾದಿನದಲ್ಲಿಯೇ ಹಬ್ಬವನ್ನು ಮಾಡ ಬೇಕೆಂದು ಹೇಳುತ್ತಿರುವ ನೀವು ಆ ಅಮಾವಾಸ್ಯಾದಿನದಲ್ಲಿ ಹಬ್ಬವನ್ನು ಮಾಡುವಾಗ ಹೇಗೆ ಸಂಕಲ್ಪಿಸುವಿರೋ ತಿಳಿಯದು. ಅಮಾವಾಸ್ಯಾ ಎಂದು ಹೇಳಿ ಸಂಕಲ್ಪಿಸಿ ಬಲಿಪಾಡ್ಯವನ್ನು ಅನುಷ್ಠಿಸು

ವಿರೋ? ಅಮಾವಾಸ್ಯೆಯಲ್ಲಿ ಪಾಡ್ಯ ಎಂದು ಹೇಳಿ ಸಂಕಲ್ಪಿಸುವಿರೋ? ದೇವರೇ ಬಲ್ಲ. ಇದು ಗಮನಾರ್ಹ.

# ಯುಗಾದಿಪಾಡ್ಯ ಮತ್ತು ನವರಾತ್ರಿಪಾಡ್ಯಗಳ ನಿರ್ಣಯ

**(25) ಏವಂ ವತ್ಸರಾದಿಪ್ರತಿಪದಾದಾವಪಿ ಬೋಧ್ಯಂ.**

"ಹೀಗೆಯೇ ಯುಗಾದಿಪಾಡ್ಯ ಮುಂತಾದ ಪಾಡ್ಯಗಳಲ್ಲಿ ನಿರ್ಣಯ ವನ್ನು ತಿಳಿಯ ಬೇಕು."

ಸ್ಮೃತಿಮುಕ್ತಾವಲೀಕಾರರು ಶುಕ್ಲಪಕ್ಷದ ಪಾಡ್ಯಗಳ ಸಾಮಾನ್ಯ ನಿರ್ಣಯವನ್ನು ಮುಗಿಸಿದರು. ದೀಪಾವಳೀ ಪಾಡ್ಯದ ವಿಶೇಷನಿರ್ಣಯವನ್ನೂ ಮುಗಿಸಿದರು. ಕೊನೆಗೆ ಇದರಂತೆಯೇ ಯುಗಾದಿಪಾಡ್ಯ ಮುಂತಾದ ಎಲ್ಲಾ ಪಾಡ್ಯಗಳಲ್ಲಿಯೂ ನಿರ್ಣಯವನ್ನು ತಿಳಿಯಬೇಕು. ಎಂದು ಹೇಳಿರುವರು.

ದೀಪಾವಳೀಹಬ್ಬವನ್ನು ಅಮಾವಾಸ್ಯಾಸಂಯುಕ್ತವಾದ ಪಾಡ್ಯದಿನ ದಲ್ಲಿಯೇ ಮಾಡಬೇಕೆಂದು ಅವರು ಸಮರ್ಥಿಸಿರುವ ವಿಷಯವು ವಾಚಕರಿಗೆ ಮನದಟ್ಟಾಗಿರ ಬಹುದು. "ಅದರಂತೆಯೇ ಯುಗಾದಿಪಾಡ್ಯ ಮುಂತಾದ ಹಬ್ಬಗಳನ್ನೂ ಅಮಾವಾಸ್ಯಾಯುಕ್ತವಾದ ಪಾಡ್ಯದಿನದಲ್ಲಿಯೇ ಮಾಡ ಬೇಕು." ಎಂಬ ವಿಷಯವು ಮೇಲ್ಕಂಡ ವಾಕ್ಯದಿಂದ ಸ್ಪಷ್ಟವಾಗಿ ಹೇಳ ಲ್ಪಟ್ಟಿದೆ.

ಶುಕ್ಲಪಕ್ಷದ ಪಾಡ್ಯಗಳಲ್ಲಿ ವಿಶೇಷವಾಗಿ ಹಬ್ಬವನ್ನು ಆಚರಿ ಸುವುದು ಯುಗಾದಿಪಾಡ್ಯ ನವರಾತ್ರಿಪಾಡ್ಯ ಬಲಿಪಾಡ್ಯ ಎಂಬ ಮೂರು ಪಾಡ್ಯಗಳಲ್ಲಿಯೇ ಹೊರತು ಬೇರೆ ಪಾಡ್ಯಗಳಲ್ಲಿಲ್ಲ. ಈ ಮೂರರಲ್ಲಿ ದೀಪಾವಳೀ ನಿರ್ಣಯವನ್ನು ಗ್ರಂಥಕಾರರು ವಿಸ್ತಾರವಾಗಿ ಮಾಡಿದರು. ಉಳಿದ ಎರಡು ಪಾಡ್ಯಗಳ ನಿರ್ಣಯವನ್ನು ಮಾಡಿಲ್ಲ. ಅವುಗಳ ನಿರ್ಣಯವೂ ಈ ನಿರ್ಣ ಯಕ್ಕೆ ಸಮಾನವಾಗಿರುವುದರಿಂದ ಅವುಗಳ ನಿರ್ಣಯವನ್ನು ಪ್ರತ್ಯೇಕವಾಗಿ ಮಾಡಿಲ್ಲ ಎಂಬ ಅಂಶವನ್ನು ತಿಳಿಸುವುದಕ್ಕಾಗಿ ಈ ವಾಕ್ಯವನ್ನು ಬರೆದಿ ರುವರು.

ಈ ವಾಕ್ಯದಲ್ಲಿ 'ವತ್ಸರಾದಿ ಪ್ರತಿಪತ್' ಎಂಬ ಪದದಿಂದ ಯುಗಾದಿ ಪಾಡ್ಯವನ್ನೂ 'ಆದಿ' ಎಂಬ ಪದದಿಂದ ನವರಾತ್ರಿಪಾಡ್ಯವನ್ನೂ ಹೇಳಿರುವರು. ಆದ್ದರಿಂದ ನವರಾತ್ರಿಪಾಡ್ಯ ಯುಗಾದಿಪಾಡ್ಯ ಈ ಎರಡು ಪಾಡ್ಯಗಳಲ್ಲಿಯೂ ಬಲಿಪಾಡ್ಯದಂತೆ ನಿರ್ಣಯವನ್ನು ತಿಳಿಯಬೇಕು ಅಂದರೆ ಅಮಾವಾಸ್ಯಾಯುಕ್ತವಾದ ಪಾಡ್ಯದಿನದಲ್ಲಿಯೇ ಯುಗಾದಿಹಬ್ಬವನ್ನೂ ನವರಾತ್ರಿಪಾಡ್ಯದಲ್ಲಿ ಮಾಡಬೇಕಾದ ಹಬ್ಬವನ್ನೂ ಮಾಡಬೇಕೆಂದು ಸ್ಮೃತಿಮುಕ್ತಾವಲೀಕಾರರು ಈ ವಾಕ್ಯದಿಂದ ತಿಳಿಸಿರುವುದು ಗಮನಾರ್ಹ.

ನವರಾತ್ರಿನಿರ್ಣಯದ ಬಗ್ಗೆ ಆಗ್ರಹವೇ? (ಪುಟ 12) "ದೀಪಾವಳಿಪಾಡ್ಯದಲ್ಲಿಯೂ ಸಹ ಉಪವಾಸನಿರ್ಣಯ ಮಾಡಿ 'ಇದರಂತೆಯೇ 'ವತ್ಸರಾದಿಪ್ರತಿಪದಾದಾವಪಿ ಬೋಧ್ಯಂ' ಎಂದು ಅತಿದೇಶ ಮಾಡಿರುವುದರಿಂದ ಈ ನಿರ್ಣಯವೂ ಕೂಡ ಉಪವಾಸಕ್ಕೆ ಮಾತ್ರ ಸಂಬಂಧಪಟ್ಟಿರುತ್ತದೆ." ಇದು ರಿತ್ತಿಯವರ ಅಪೂರ್ವವಿಮರ್ಶೆ.

ದೀಪಾವಳಿಪಾಡ್ಯದಲ್ಲಿ ಸ್ಮೃತಿಮುಕ್ತಾವಲೀಕಾರರಾಗಲೀ ಇತರ ಯಾವ ಧರ್ಮಶಾಸ್ತ್ರಕಾರರಾಗಲೀ ಉಪವಾಸ ಮಾಡಬೇಕೆಂದು ಹೇಳಿಲ್ಲ. ಸ್ಮೃತಿಮುಕ್ತಾವಲೀಕಾರರು ಹಬ್ಬವನ್ನು ಮಾಡಬೇಕೆಂದು ಹೇಳಿದ್ದಲ್ಲದೆ ಆ ಹಬ್ಬದಲ್ಲಿ ಮಾಡಬೇಕಾದ ಅಭ್ಯಂಗ ಮುಂತಾದ ಮಂಗಲಕಾರ್ಯಗಳ ಪಟ್ಟಿಯನ್ನೂ ಕೊಟ್ಟಿರುವರು ಎಂಬ ವಿಷಯವನ್ನು ಹಿಂದೆ ಸಮರ್ಥಿಸಿರುತ್ತೇನೆ. ಹೀಗಿರುವಾಗ ದೀಪಾವಳೀಪಾಡ್ಯದಿನದಲ್ಲಿ ಉಪವಾಸವನ್ನು ನಿರ್ಣಯಿಸಿರುವರೆಂದೂ ಅದರಂತೆಯೇ ಯುಗಾದಿಪಾಡ್ಯ ನವರಾತ್ರಿಪಾಡ್ಯಗಳಲ್ಲಿಯೂ ಉಪವಾಸನಿರ್ಣಯವನ್ನು ಮಾಡಿರುವುದಾಗಿಯೂ ಹಸಿ ಸುಳ್ಳನ್ನು ಹೇಳುತ್ತಿರುವ ಇವರನ್ನು ಮಿಥ್ಯಾವಾದಿಶಿರೋಮಣಿ ಎಂದು ಹೇಳುವುದು ಸೂಕ್ತವಾಗಿದೆ.

## ನವರಾತ್ರಿ ಪಾಡ್ಯ ನಿರ್ಣಯ

(26) ಆಶ್ವಯುಕ್ ಶುಕ್ಲಪ್ರತಿಪಶ್ಯಾವ್ಯೇ ದುರ್ಗಾರ್ಚನಂ ಪ್ರತಿ ।
ಪೂರ್ವತಃ ಪರತೋ ವಾಪಿ ಯಸ್ಮಿನ್ನಾವರ್ತನೀ ಭವೇತ್ ||

ತಸ್ಯಾಂ ವ್ರತಮುಪಕ್ರಮ್ಯ ನವದುರ್ಗಾಂ ಪ್ರಪೂಜಯೇತ್ ।
ತಿಥಿಷ್ವಾವರ್ತಸಾದ್ಯೇಷು ನವಮ್ಯಂತೇಷು ಪೂಜಯೇತ್ ॥
ತಿಥಿಪ್ರಯುಕ್ತಪೂಜಾಯಾಂ ತಿಥಿರಾವರ್ತನೇ ನ ಚೇತ್ ।
ಸಾ ಚ ಪೂರ್ವಾ ತಿಥಿಶ್ಚೈವ ಸಂಮುಖಃ ಪೂರ್ವವಾಸರಃ ॥

(ದೇವೀಪುರಾಣ)

"ನವರಾತ್ರಿಪಾಡ್ಯವು ಅಮಾವಾಸ್ಯಾದಿನ ಪಾಡ್ಯದಿನ ಎಂಬ ಎರಡು ದಿನಗಳಲ್ಲಿ ಎಂದು ಮಧ್ಯಾಹ್ನದಲ್ಲಿದೆಯೋ ಅಂದು ನವರಾತ್ರಿವ್ರತವನ್ನು ಆರಂಭಿಸಿ ನವಮೀ ವರೆಗೆ ದುರ್ಗೆಯನ್ನು ಪೂಜಿಸ ಬೇಕು. ಎರಡು ದಿನಗಳಲ್ಲಿಯೂ ಮಧ್ಯಾಹ್ನದಲ್ಲಿ ಪಾಡ್ಯವಿಲ್ಲದಿದ್ದರೆ ಅಮಾವಾಸ್ಯಾದಿನದಲ್ಲಿಯೇ ಮಾಡಬೇಕು. ಅಂದು 24 ಗಳಿಗೆಗಳ ಮೇಲೆ ಪಾಡ್ಯವು ಬರುವುದೇ ಹಾಗೆ ಹೇಳುವುದಕ್ಕೆ ಮುಖ್ಯಕಾರಣವಾಗಿರುತ್ತದೆ" ಇದು ಸ್ಮೃತಿಮುಕ್ತಾವಲೀಕಾರರು ಉದಾಹರಿಸಿರುವ ಪ್ರಮಾಣವೆಂಬ ವಿಷಯವು ಗಮನಾರ್ಹ.

ಈ ವಾಕ್ಯದಲ್ಲಿ ನವರಾತ್ರಿಪಾಡ್ಯಕ್ಕೆ ಮಧ್ಯಾಹ್ನಕಾಲವು ಮುಖ್ಯ ಎಂದು ಹೇಳಿರುತ್ತದೆ. ಈ ಮುಖ್ಯಕಾಲವಾಗಿರುವ ಮಧ್ಯಾಹ್ನದಲ್ಲಿ ಎಂದು ಇದೆಯೋ ಅಂದು ಹಬ್ಬವನ್ನು ಮಾಡಬೇಕು ಎಂದು ಹೇಳಿರುತ್ತದೆ. ಸಾಯಾಹ್ನಕಾಲ ಅಂದರೆ ಸೂರ್ಯೋದಯಾನಂತರದಲ್ಲಿ 24 ಗಳಿಗೆಗಳ ಮೇಲೆ 30 ಗಳಿಗೆಗಳ ವರೆಗಿನ ಕಾಲವು ಅಮುಖ್ಯ ಎಂದು ಹೇಳಿರುತ್ತದೆ. ಎರಡುದಿನಗಳಲ್ಲಿಯೂ ಮುಖ್ಯಕಾಲವಾದ ಮಧ್ಯಾಹ್ನದಲ್ಲಿ ಪಾಡ್ಯವು ಇಲ್ಲವಿದ್ದರೆ ಅಮುಖ್ಯಕಾಲವಾಗಿರುವ ಸಾಯಾಹ್ನಕಾಲದಲ್ಲಿ ಎಂದು ಪಾಡ್ಯವು ಇದೆಯೋ ಅಂದೇ ಹಬ್ಬವನ್ನು ಮಾಡಬೇಕೆಂದು ಹೇಳಿರುತ್ತದೆ.

ದೀಪಾವಳಿಪಾಡ್ಯನಿರ್ಣಯದಲ್ಲಿ ಸಾಯಾಹ್ನಕಾಲವೇ ಮುಖ್ಯ. ನವರಾತ್ರಿಪಾಡ್ಯನಿರ್ಣಯದಲ್ಲಿ ಈ ವಿಶೇಷವಾಕ್ಯದಿಂದ ಸಿದ್ಧವಾಗಿರುವ ಮಧ್ಯಾಹ್ನಕಾಲವೇ ಮುಖ್ಯ. ಉಳಿದ ವಿಷಯಗಳೆಲ್ಲವೂ ಎರಡಕ್ಕೂ ಸಮಾನ ಎಂಬ ವಿಷಯವು ಗಮನಾರ್ಹ.

ಯುಗಾದಿಪಾಡ್ಯದಲ್ಲಿ ವಿಶೇಷವಚನವಿಲ್ಲದಿರುವುದರಿಂದ ಎಲ್ಲಾ ಅಂಶಗಳಲ್ಲಿಯೂ ದೀಪಾವಳೀಪಾಡ್ಯದ ನಿರ್ಣಯವನ್ನೇ ಸ್ವೀಕರಿಸಬೇಕೆಂದು

"ಏವಂ ವತ್ಸರಾದಿಪ್ರತಿಪದಾದಾವಪಿ ಬೋಧ್ಯಂ" ಎಂಬ ವಾಕ್ಯದಿಂದ ಸಮರ್ಥಿಸಿರುವುದು ಗಮನಾರ್ಹ.

ಈ ನವರಾತ್ರಿಪಾಡ್ಯದಲ್ಲಿಯೂ ಪಾಡ್ಯತಿಥಿಗೆ ಮರುದಿನದಲ್ಲಿ ಮಧ್ಯಾಹ್ನವ್ಯಾಪ್ತಿ ಇಲ್ಲದಿರುವಾಗ ಅಮಾವಾಸ್ಯಾದಿನದಲ್ಲಿಯೇ ಹಬ್ಬವನ್ನು ಮಾಡಬೇಕೆಂದೂ ಆ ಹಬ್ಬಕ್ಕೆ ಅಂಗವಾದ ಅಭ್ಯಂಗ ಮುಂತಾದವುಗಳನ್ನು ಅಂದೇ ಮಾಡಬೇಕೆಂದೂ ಇದೇ ವಾಕ್ಯದಿಂದ ಸ್ಮೃತಿಮುಕ್ತಾವಲೀಕಾರರು ಸಮರ್ಥಿಸಿರುವುದು ಗಮನಾರ್ಹ.

## ಮಧ್ಯಾಹ್ನವ್ಯಾಪ್ತಿ ಎಂದರೇನು ?

ನವರಾತ್ರಿಪಾಡ್ಯಕ್ಕೆ ಮಧ್ಯಾಹ್ನವ್ಯಾಪ್ತಿಯು ಮುಖ್ಯವೆಂದು ದೇವೀ ಪುರಾಣವಾಕ್ಯದಿಂದ ಸಮರ್ಥಿಸಿರುವೆವು. ಈಗ ಮಧ್ಯಾಹ್ನವೆಂದರೇನು? ಮಧ್ಯಾಹ್ನವ್ಯಾಪ್ತಿಯೆಂದರೇನು ? ಮಧ್ಯಾಹ್ನವ್ಯಾಪ್ತಿ ಇಲ್ಲದಿರುವಾಗ ಏನು ಮಾಡಬೇಕು ಎಂಬ ಅಂಶವನ್ನು ವಿವರಿಸುವೆನು.

## ನವರಾತ್ರಿ ನಿರ್ಣಯಕ್ಕೆ ಸಂಬಂಧಿಸಿದ ಮಧ್ಯಾಹ್ನ ಯಾವುದು

ಹಗಲಿನ ಪ್ರಮಾಣವನ್ನು ಐದು ವಿಭಾಗವಾಗಿ ವಿಂಗಡಿಸ ಬೇಕು. ಆ ಐದು ವಿಭಾಗಗಳಲ್ಲಿ ಮೂರನೆಯ ವಿಭಾಗವು ಮಧ್ಯಾಹ್ನವೆನಿಸುತ್ತದೆ. ಉದಾಹರಣೆ—ಮಠದ ಪಂಚಾಂಗದಲ್ಲಿ ನವರಾತ್ರಿಪಾಡ್ಯದಿನದ ಹಿಂದಿನ ದಿನದಲ್ಲಿ 29 ಗಳಿಗೆ 30 ಗಳಗಳು ಹಗಲಿನ ಪ್ರಮಾಣವೆಂದು ಬರೆದಿದೆ. ಈ ಹಗಲಿನ ಪ್ರಮಾಣವನ್ನು ಐದು ವಿಭಾಗವಾಗಿ ವಿಂಗಡಿಸಿದಾಗ ಒಂದೊಂದು ವಿಭಾಗಕ್ಕೆ 5 ಗಳಿಗೆ 54 ಪಳಗಳಾಗುತ್ತವೆ. ಈ ಅಳತೆಯಿಂದ ಮೂರನೆಯ ವಿಭಾಗವು ಅಂದು 11 ಗಳಿಗೆ 48 ಪಳಗಳಿಂದ ಆರಂಭಿಸಿ 17 ಗಳಿಗೆ 42 ಪಳಗಳ ವರೆಗೆ ಇರುತ್ತದೆ. ಇದೇ ಮಧ್ಯಾಹ್ನವೆನಿಸುತ್ತದೆ.

## ಮಧ್ಯಾಹ್ನವ್ಯಾಪ್ತಿ ಎಂದರೇನು ?

ಈ ಮಧ್ಯಾಹ್ನಕಾಲದ ಆರಂಭದಿಂದ ಮುಗಿಯುವ ವರೆಗೆ ತಿಥಿಯು ಇರುವುದೇ ತಿಥಿಗೆ ಮಧ್ಯಾಹ್ನವ್ಯಾಪ್ತಿಯೆನಿಸುತ್ತದೆ.

## ಮಧ್ಯಾಹ್ನವ್ಯಾಪ್ತಿ ಇಲ್ಲದಿರುವಾಗ ನಿರ್ಣಯ ಹೇಗೆ?

ತಿಥಿಗೆ ಮಧ್ಯಾಹ್ನವ್ಯಾಪ್ತಿ ಇಲ್ಲದಿರುವಾಗ ಹಿಂದಿನ ಅಥವಾ ಮುಂದಿನ ದಿನದಲ್ಲಿ ಎಂದು ಮಧ್ಯಾಹ್ನಕಾಲದಲ್ಲಿ ಅಧಿಕವಾಗಿದೆಯೋ ಅಂದೇ ಆ ತಿಥಿಯಲ್ಲಿ ಮಾಡ ಬೇಕಾದ ಎಲ್ಲಾ ಕಾರ್ಯಗಳನ್ನೂ ಮಾಡಬೇಕು. ಉದಾ— ನವರಾತ್ರಿಪಾಡ್ಯವು ಅಮಾವಾಸ್ಯಾದಿನದಲ್ಲಿ 13 ಗಳಿಗೆ 38 ಪಳಗಳಲ್ಲಿ ಆರಂಭಿಸುವುದಾಗಿಯೂ ಮರುದಿನದಲ್ಲಿ 15 ಗಳಿಗೆ 25 ಪಳಗಳಲ್ಲಿ ಮುಗಿಯುವುದಾಗಿಯೂ ಮಠದ ಪಂಚಾಂಗದಲ್ಲಿ ಬರೆದಿದೆ. ಆದ್ದರಿಂದ ಅಮಾವಾಸ್ಯಾದಿನದಲ್ಲಿ 13 ಗಳಿಗೆ 38 ಪಳಗಳಿಂದ ಆರಂಭಿಸಿ ಮಧ್ಯಾಹ್ನವು ಮುಗಿಯುವ 17 ಗಳಿಗೆ 42 ಪಳಗಳ ವರೆಗೆ ಅಂದರೆ 4 ಗಳಿಗೆ 4 ಪಳಗಳ ವರೆಗೆ ಪಾಡ್ಯವು ಮಧ್ಯಾಹ್ನಕಾಲದಲ್ಲಿದೆ. ಮರುದಿನದಲ್ಲಿ ಮಧ್ಯಾಹ್ನಕಾಲವು ಆರಂಭಿಸುವ 11 ಗಳಿಗೆ 48 ಪಳಗಳಿಂದ ಆರಂಭಿಸಿ 15 ಗಳಿಗೆ 25 ಪಳಗಳಲ್ಲಿ ಮುಗಿಯುವ ಪಾಡ್ಯತಿಥಿಯ ವರೆಗೆ ಅಂದರೆ 3 ಗಳಿಗೆ 37 ಪಳಗಳು ಮಧ್ಯಾಹ್ನಕಾಲದಲ್ಲಿದ್ದಂತಾಯಿತು. ಇದರಿಂದ ಪಾಡ್ಯತಿಥಿಗೆ ಅಮಾವಾಸ್ಯಾದಿನದಲ್ಲಿ ಮಧ್ಯಾಹ್ನದಲ್ಲಿ ಅಧಿಕವ್ಯಾಪ್ತಿಯೂ ಪಾಡ್ಯದಿನದಲ್ಲಿ ಅಲ್ಪವ್ಯಾಪ್ತಿಯೂ ಇದ್ದಂತಾಯಿತು. ಆದ್ದರಿಂದ ಹಿಂದೆ ಹೇಳಿದ ನಿಯಮದಿಂದ ಅಮಾವಾಸ್ಯಾದಿನದಲ್ಲಿ ನವರಾತ್ರಿ ಪಾಡ್ಯದಲ್ಲಿ ಮಾಡ ಬೇಕಾದ ಹಬ್ಬವನ್ನು ಮಾಡ ಬೇಕು.

## ರಿತ್ತಿಯವರು ಸುಳ್ಳು ಹೇಳಿರುವರು

ರಿತ್ತಿಯವರು ಈ ನಿಯಮವನ್ನು ಒಪ್ಪಿದ್ದಾರೆ. ಆದರೆ ಪಾಡ್ಯತಿಥಿಯು ಮರುದಿನದಲ್ಲಿಯೇ ಮಧ್ಯಾಹ್ನದಲ್ಲಿ ಅಧಿಕವ್ಯಾಪ್ತಿಯನ್ನು ಪಡೆದಿರುತ್ತದೆ ಎಂದು ಸುಳ್ಳು ಹೇಳಿ ಮರುದಿನದಲ್ಲಿಯೇ ಹಬ್ಬವನ್ನು ಮಾಡ ಬೇಕೆಂದು ಸಮರ್ಥಿಸುವುದಕ್ಕೆ ಯತ್ನಿಸಿದ್ದಾರೆ ಎಂಬ ವಿಷಯವು ಗಮನಾರ್ಹ. ಪಂಚಾಂಗವನ್ನು ನೋಡಿದರೆ ಅವರು ಹೇಳಿದ ಸುಳ್ಳು ಬಯಲಾಗುತ್ತದೆ ಎಂಬ ವಿಷಯವು ಗಮನಾರ್ಹ. ಅವರ ವಾಕ್ಯವನ್ನು ಕೆಳಗೆ ಕೊಟ್ಟಿದ್ದೇನೆ.

ನವರಾತ್ರಿನಿರ್ಣಯದ ಬಗ್ಗೆ ಆಗ್ರಹವೇ? (ಪುಟ 9) "ಎರಡು ದಿನಗಳಲ್ಲಿಯೂ ಮಧ್ಯಾಹ್ನವ್ಯಾಪ್ತಿ ಇರಲಿಲ್ಲ. ಮೊದಲಿನ ದಿನ ಸಾಮಾನ್ಯ

ನಾಲ್ಕುಗಳಿಗೆಗಳೂ ಮರುದಿನ ಐದುಗಳಿಗೆಗಳೂ ಮಧ್ಯಾಹ್ನವ್ಯಾಪಿನಿಯಾಗಿದ್ದವು ಎಂದರೆ ಮರುದಿನ ಮಧ್ಯಾಹ್ನವ್ಯಾಪ್ತಿ ಅಧಿಕವಾಗಿತ್ತು. ಹೀಗಿದ್ದಾಗ ಪರದಿನದಲ್ಲಿಯೇ ಆಚರಿಸ ಬೇಕು."

ಮೇಲ್ಕಂಡ ಎಲ್ಲಾ ವಿಮರ್ಶೆಯಿಂದ ಈ ವರ್ಷದ ನವರಾತ್ರಿಹಬ್ಬವು ಅಮಾವಾಸ್ಯಾದಿನದಲ್ಲಿಯೇ ಅನುಷ್ಠಿಸಿರುವುದು ಅತ್ಯಂತಯುಕ್ತವೆಂದು ರಿತ್ತಿಯವರಿಂದ ಅಂಗೀಕರಿಸಲ್ಪಟ್ಟ ನಿಯಮದಿಂದಲೇ ಸಿದ್ಧವಾಯಿತು.

## ಸ್ಮೃತಿಮುಕ್ತಾವಲೀಗ್ರಂಥಕಾರರ ಪರಿಚಯ

(27) ದುಷ್ಟವಾದೀಭಪಂಚಾಸ್ಯಾನ್ ಮಧ್ವಶಾಸ್ತ್ರಪ್ರವರ್ತಕಾನ್ ।
ರಾಘವೇಂದ್ರಗುರೂನ್ ವಂದೇ ಮಮ ವಿದ್ಯಾಗುರೂನ್ ಸದಾ ॥
ಸ್ಮೃತಿಮುಕ್ತಾವಲಿರ್ನಾಮ ವಿದುಷಾಂ ಕಂಠಭೂಷಣಂ ।
ಕ್ರಿಯತೇ ಸುಜನಪ್ರೀತ್ಯೈ ಕೃಷ್ಣಾಚಾರ್ಯವಿಪಶ್ಚಿತಾ ॥
ಶ್ರೀಮನ್ಮಧ್ವಮತಾಚಾರಾಃ ಸಾತ್ವಿಕಾಃ ಸ್ಮೃತಿಮೂಲತಃ ।
ಸರ್ವೋತ್ಕೃಷ್ಟಸದಾಚಾರ ಇತಿ ಮಂದದೃಶಾಂ ದೃಢಂ ॥
ವಿಶ್ವಾಸಜನನಾರ್ಥಾಯ ಸುಬೋಧಾಯ ಮಹಾತ್ಮನಾಂ ।
ಸಂಗೃಹೀತಾಶ್ಚ ಸ್ಮೃತಯಃ ಪುರಾ ಶಿಷ್ಟೈರ್ಮಹಾತ್ಮಭಿಃ ॥
ತತೋಽಪಿ ತಾಃ ಸಂಗ್ರಹೀಷ್ಯೇ ಸುಬೋಧಾಯಾಲ್ಪಮೇಧಸಾಂ ।

"ದುರ್ವಾದಿಗಳೆಂಬ ಆನೆಗಳನ್ನು ನಿಗ್ರಹಿಸುವ ವಿಷಯದಲ್ಲಿ ಸಿಂಹದಂತಿರುವವರೂ ಮಧ್ವಶಾಸ್ತ್ರಪ್ರವರ್ತಕರೂ ಆಗಿರುವ ಶ್ರೀರಾಘವೇಂದ್ರಗುರುಗಳಲ್ಲಿ ನಾನು ವಿದ್ಯಾಭ್ಯಾಸವನ್ನು ಮಾಡಿರುವೆನು. ಅಂತಹ ನನ್ನ ವಿದ್ಯಾಗುರುಗಳನ್ನು ಕೃಷ್ಣಾಚಾರ್ಯನೆಂಬ ನಾನು ಯಾವಾಗಲೂ ಸ್ತುತಿಸುವೆನು ಮತ್ತು ನಮಸ್ಕರಿಸುವೆನು. ಪಂಡಿತರುಗಳ ಕಂಠಾಭರಣದಂತಿರುವ ಸ್ಮೃತಿಮುಕ್ತಾವಲಿ ಎಂಬ ಗ್ರಂಥವನ್ನು ಸಜ್ಜನರು ಸಂತೋಷಿಸಲೆಂದು ಬರೆಯುತ್ತಿರುವೆನು."

"ಶ್ರೀಮಧ್ವಾಚಾರ್ಯರಿಗೆ ಸಮ್ಮತವಾದ ಎಲ್ಲಾ ಆಚಾರಗಳೂ ಸ್ಮೃತಿಮೂಲಕವಾಗಿರುವುದರಿಂದ ಸಾತ್ವಿಕಾಚಾರಗಳೆಂದೂ ಅತ್ಯುತ್ತಮ

ಸದಾಚಾರವೆಂದೂ ಮಂದಮತಿಗಳಾದ ಕೆಲಸಜ್ಜನರಿಗೆ ನಂಬಿಕೆಯನ್ನು ಹುಟ್ಟಿಸ ಬೇಕಾಗಿದೆ. ಸೂಕ್ಷ್ಮಮತಿಯ ಮಹಾತ್ಮರಿಗೆ ಸುಲಭವಾಗಿ ಧರ್ಮವನ್ನು ತಿಳಿಸಬೇಕಾಗಿದೆ. ಈ ಉದ್ದೇಶ್ಯದಿಂದ ಸದಾಚಾರಸಂಪನ್ನರಾದ ಮಹಾತ್ಮರುಗಳಿಂದ ಸ್ಮೃತಿವಾಕ್ಯಗಳು ಸಂಗ್ರಹಿಸಲ್ಪಟ್ಟಿವೆ. ಶಿಷ್ಟರಾದ ಮಹಾತ್ಮರುಗಳಿಂದ ಸಂಗ್ರಹಿಸಲ್ಪಟ್ಟ ಸ್ಮೃತಿವಾಕ್ಯಗಳನ್ನು ಈಗ ಮಂದಬುದ್ಧಿಗಳಾದ ಸಜ್ಜನರಿಗೆ ದಿವ್ಯಜ್ಞಾನವನ್ನು ಹುಟ್ಟಿಸುವುದಕ್ಕಾಗಿ ಸಂಗ್ರಹಿಸುತ್ತಿರುವೆನು.'' ಇವುಗಳು ಸ್ಮೃತಿಮುಕ್ತಾವಲೀಗ್ರಂಥದ ಮಂಗಳಾಚರಣದಲ್ಲಿ ಗ್ರಂಥಕಾರರು ಬರೆದಿರುವ ಶ್ಲೋಕಗಳು.

ಈ ಶ್ಲೋಕಗಳಿಂದ ಶ್ರೀರಾಘವೇಂದ್ರಗುರುಸಾರ್ವಭೌಮರ ವಿದ್ಯಾಪ್ರಭಾವವನ್ನು ವರ್ಣಿಸಿರುವರು. ಅವರೇ ತನಗೆ ವಿದ್ಯಾಗುರುಗಳು ಎಂದು ಹೇಳಿರುವರು. ಅವರು ಮಧ್ವಶಾಸ್ತ್ರಪ್ರವರ್ತಕರೆಂದು ಹೇಳುತ್ತಾ ಅವರಿಂದ ತನಗೆ ಲಬ್ಧವಾಗಿರುವ ಧರ್ಮಶಾಸ್ತ್ರಜ್ಞಾನವು ಎಲ್ಲಾ ವಿಧದಿಂದಲೂ ಶ್ರೀಮಧ್ವಾಚಾರ್ಯರಿಗೆ ಸಂಮತ ಎಂಬ ಅಂಶವನ್ನು ಸ್ಪಷ್ಟಪಡಿಸಿರುವರು. ಅವರ ಉಪದೇಶದಿಂದ ಲಬ್ಧವಾದ ಜ್ಞಾನದ ಬಲದಿಂದ ರಚಿತವಾಗಿರುವ ಈ ಗ್ರಂಥವು ಜ್ಞಾನಿಗಳಿಗೆ ಕಂಠಾಭರಣವೆಂದು ತನ್ನ ಗ್ರಂಥವನ್ನು ತಾನೇ ಮುಕ್ತಕಂಠದಿಂದ ಹೊಗಳಿರುವರು. ಶ್ರೀಮಧ್ವಾಚಾರ್ಯರಿಗೆ ಸಮ್ಮತವಾದ ಎಲ್ಲಾ ಆಚಾರಗಳಿಗೂ ಸ್ಮೃತಿಗಳೇ ಮೂಲವೆಂದೂ ಆ ಆಚಾರಗಳೇ ಸಾತ್ವಿಕಾಚಾರಗಳೆಂದೂ ಅತ್ಯುತ್ತಮಸದಾಚಾರಗಳೆಂದೂ ಘೋಷಿಸಿರುವರು. ಇದರಿಂದ ರಿತ್ತಿಯವರು ಪರಮಪವಿತ್ರಗ್ರಂಥಗಳೆಂದು ಹೊಗಳುತ್ತಿರುವ ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಹೇಳಿರುವ ಆಚಾರಕ್ಕೂ ಈ ಗ್ರಂಥದಲ್ಲಿ ಹೇಳಿರುವ ಆಚಾರಕ್ಕೂ ವಿರೋಧವು ಬಂದರೆ ಅಲ್ಲಿ ಹೇಳಿರುವ ಆಚಾರವನ್ನು ಬಿಡ ಬೇಕೆಂದು ಸೂಚಿಸಿರುವರು. ತಾವು ಘೋಷಿಸಿದ ಈ ವಿಷಯದಲ್ಲಿ ಮಂದಮತಿಗಳಿಗೆ ನಂಬಿಕೆಯನ್ನು ಹುಟ್ಟಿಸುವುದಕ್ಕಾಗಿಯೂ ಸೂಕ್ಷ್ಮಬುದ್ಧಿಯುಳ್ಳ ಮಹಾತ್ಮರಿಗೆ ಅತಿಸುಲಭವಾಗಿ ಜ್ಞಾನವನ್ನು ಹುಟ್ಟಿಸುವುದಕ್ಕಾಗಿಯೂ ಮಹಾತ್ಮರೂ ಸದಾಚಾರಸಂಪನ್ನರೂ ಆಗಿರುವ ಪ್ರಾಚೀನರು ಸ್ಮೃತಿವಾಕ್ಯಗಳನ್ನು ಸಂಗ್ರಹಿಸಿರುವುದಾಗಿ ಹೇಳಿರುವರು.

ಆ ಸ್ಮೃತಿವಾಕ್ಯಗಳೇ ತನ್ನ ಗ್ರಂಥಕ್ಕೆ ಆಧಾರವೆಂದೂ ಘೋಷಿಸಿರುವವರು. ಅವುಗಳನ್ನೇ ಈ ಗ್ರಂಥದಲ್ಲಿ ಸಂಗ್ರಹಿಸಿರುವುದಾಗಿ ಪ್ರತಿಜ್ಞೆ ಮಾಡಿರುವರು. ಇದರಿಂದ ಇತರ ಗ್ರಂಥಗಳಲ್ಲಿ ಉದಾಹರಿಸಿರುವ ಪ್ರಮಾಣವಚನಗಳಿಗೂ ಈ ಗ್ರಂಥದಲ್ಲಿ ಉದಾಹರಿಸಿರುವ ಪ್ರಮಾಣವಚನಗಳಿಗೂ ವಿರೋಧವು ಬಂದರೆ ಶಿಷ್ಟಸಂಗೃಹೀತವಾದ ಈ ವಚನಗಳೇ ಪ್ರಬಲವೆಂದೂ ಇವುಗಳಿಗೆ ಅನುಗುಣವಾದ ಅರ್ಥವನ್ನೇ ಆ ವಾಕ್ಯಗಳಿಗೆ ಹೇಳ ಬೇಕೆಂದೂ ತಿಳಿಸಿರುವರು. ಅದು ಮಾತ್ರವಲ್ಲ. ಸಾತ್ವಿಕಪುರಾಣಗಳಿಗೂ ತಾಮಸಪುರಾಣಗಳಿಗೂ ವಿರೋಧವು ಬಂದಾಗ ತಾಮಸಪುರಾಣವಚನಗಳನ್ನು ಆಪ್ತಮೂಲಕವಲ್ಲವೆಂದು ಹೇಳುತ್ತಾ ಧಿಕ್ಕರಿಸಿದಂತೆ ಈ ಗ್ರಂಥದಲ್ಲಿ ಉದಾಹರಿಸಲ್ಪಟ್ಟ ಪರಮಾಪ್ತಮೂಲಕವಾದ ವಚನಗಳಿಗೆ ವಿರುದ್ಧವಾಗಿರುವ ವಚನಗಳು ಆಪ್ತಮೂಲಕವಲ್ಲವೆಂದು ಧಿಕ್ಕರಿಸಲ್ಪಡ ಬಹುದೆಂದೂ ಸೂಚಿಸಿರುವರು. ಸಾತ್ವಿಕಪುರಾಣಗಳಿಗೆ ಅವಿರುದ್ಧವಾದ ವಚನಗಳು ತಾಮಸಪುರಾಣಗಳಲ್ಲಿದ್ದರೂ ಮಾನ್ಯವಾಗಿರುವಂತೆ ಈ ಗ್ರಂಥಕ್ಕೆ ಅವಿರುದ್ಧವಾದ ಭಾಗವು ಇತರ ಧರ್ಮಶಾಸ್ತ್ರನಿಬಂಧಗ್ರಂಥಗಳಲ್ಲಿದ್ದರೂ ಮಾನ್ಯವೆಂದು ತಿಳಿಸಿರುವರು.

**(28) ಅಸ್ಮದ್ಗುರು ಶಿರೋಮಣಯಸ್ತು ಯಥಾಸಂಪ್ರದಾಯ ಮಾಚರಂತಿ**

“ನಮ್ಮ ಗುರುಶಿರೋಮಣಿಗಳಾದ ಶ್ರೀರಾಘವೇಂದ್ರತೀರ್ಥರು ಹಿಂದಿನ ಸಂಪ್ರದಾಯವನ್ನು ಬಿಡದೆ ಅನುಷ್ಠಿಸುತ್ತಿರುವರು.” ಎಂದು ಹೇಳುತ್ತಾ ಪ್ರಾಚೀನಸಂಪ್ರದಾಯಕ್ಕೆ ವಿಶೇಷಗೌರವವನ್ನು ಶ್ರೀರಾಘವೇಂದ್ರಗುರುಸಾರ್ವಭೌಮರು ಕೊಟ್ಟಿರುವುದಾಗಿ ತಿಳಿಸಿರುವರು. ಅದೇ ಸದಾಚಾರವನ್ನು ಈ ಗ್ರಂಥದಲ್ಲಿ ತಿಳಿಸುತ್ತಿರುವುದರಿಂದ ಪ್ರಾಚೀನಸದಾಚಾರವನ್ನು ತಿಳಿಸುವ ವಿಷಯದಲ್ಲಿ ತನ್ನ ಗ್ರಂಥವು ಪ್ರಥಮಸ್ಥಾನವನ್ನು ಪಡೆದಿರುತ್ತದೆ ಎಂಬ ಅಂಶವನ್ನು ಸ್ಪಷ್ಟಪಡಿಸಿರುವರು.

ವಾಚಕಮಹಾಶಯರೇ, ಇತರಮತೀಯರೂ ಇತರಮಠೀಯರೂ ಅವರವರಿಗೆ ಮಾನ್ಯವಾದ ಗ್ರಂಥವನ್ನು ಗೌರವಿಸಲಿ. ಶ್ರೀರಾಘವೇಂದ್ರ ಮಠೀಯರು ಶ್ರೀರಾಘವೇಂದ್ರತೀರ್ಥರ ವಿದ್ಯಾಶಿಷ್ಯರಾಗಿರುವ ಶ್ರೀಕೃಷ್ಣಾ

ಚಾರ್ಯರಿಂದ ರಚಿತವಾಗಿರುವ ಸ್ಮೃತಿಮುಕ್ತಾವಲಿಯನ್ನೇ ಕೊಂಡಾಡೋಣ. ಅಲ್ಲಿ ಹೇಳಿದಂತೆ ಅನುಷ್ಠಿಸೋಣ. ಅಲ್ಲಿ ಉದಾಹರಿಸಿರುವ ವಾಕ್ಯಗಳಿಗೆ ಅರ್ಥವನ್ನು ತಿಳಿಯುವುದಕ್ಕೆ ಯತ್ನಿಸೋಣ. ಆ ವಾಕ್ಯಗಳಿಗೆ ಅರ್ಥವು ತಿಳಿಯದಿದ್ದರೆ ಆ ವಾಕ್ಯಗಳಲ್ಲಿ ಹೇಳಿರುವ ವಿಷಯಗಳನ್ನು ಸಂಗ್ರಹವಾಗಿ ಹೇಳುತ್ತಿರುವ 'ಪೂರ್ವವಿದ್ಧಾಯಾಂ ಬಲ್ಯುತ್ಸವಃ ಕಾರ್ಯಃ' 'ಏವಂ ವತ್ಸರಾದಿಪ್ರತಿಪದಾದಾವಪಿ ಬೋಧ್ಯಂ' ಮುಂತಾದ ಗ್ರಂಥಕಾರರ ವಾಕ್ಯಗಳಿಂದ ಅವುಗಳ ತಾತ್ಪರ್ಯವನ್ನು ತಿಳಿಯೋಣ. ಇಷ್ಟು ಸುಲಭವಾಗಿ ಬರೆದ ವಾಕ್ಯಗಳಿಗೂ ರಿತ್ತಿಯವರಂತೆ ವಿಪರೀತಾರ್ಥಕಲ್ಪನೆಯನ್ನು ಮಾಡಿಕೊಂಡು ಒದ್ದಾಡುವ ದುರವಸ್ಥೆಯನ್ನು ಸಂಪಾದಿಸದಿರೋಣ.

## ಆಚಾರವು ಸ್ಮೃತಿಗಳಿಗೆ ವಿರುದ್ಧವಾಗಿದ್ದರೆ ತ್ಯಾಜ್ಯ

ಶ್ರೀ ೧೦ಲ ಸುಜ್ಞಾನೇಂದ್ರತೀರ್ಥರು ತುಂಬಾ ಮುದುಕರಾಗಿರುವಾಗ ಗಂಟೆಯನ್ನು ಬಾರಿಸಿ ಅಭಿಷೇಕ ಮಂಗಳಾರತಿ ಮುಂತಾದ ಕಾರ್ಯಗಳನ್ನು ಮಾಡಲು ಶಕ್ತರಾಗಲಿಲ್ಲ. ಅದಕ್ಕಾಗಿ ಎಡಗೈಯಲ್ಲಿ ಗಂಟೆಯನ್ನು ಮುಟ್ಟಿಕೊಂಡು ಅಭಿಷೇಕವನ್ನು ಮಾಡುತ್ತಿದ್ದರು. ಅವರ ಅನಂತರದಲ್ಲಿ ಮಠದಲ್ಲಿ ಪೂಜಾಕಾಲದಲ್ಲಿ ಗಂಟೆಯನ್ನು ಬಾರಿಸುವ ಸಂಪ್ರದಾಯವು ಬಿಟ್ಟು ಹೋಯಿತು. ಗಂಟೆಯನ್ನು ಬಾರಿಸದಿರುವುದೇ ಆಚಾರವಾಯಿತು. ಶ್ರೀ ೧೦೮ ಸುಶೀಲೇಂದ್ರತೀರ್ಥರ ಕಾಲದಲ್ಲಿ ಈ ಹೊಸ ಆಚಾರವು ಬಿಡಲ್ಪಟ್ಟು ಪ್ರಾಚೀನವಾದ ಆಚಾರವು ಜಾರಿಗೆ ತರಲ್ಪಟ್ಟಿತು.

ಗ್ರಹಣದಿನದಲ್ಲಿ ಶ್ರೀರಾಯರಿಗೆ ಹಸ್ತೋದಕವನ್ನು ಮಾಡುತ್ತಿರುವ ಸಂಪ್ರದಾಯವು ಮಂತ್ರಾಲಯದಲ್ಲಿ ಅನೇಕವರ್ಷಗಳಿಂದ ಬರುತ್ತಿತ್ತು. ಪರಮಪೂಜ್ಯರಾದ ಶ್ರೀ ೧೦ಲ ಸುಯಮೀಂದ್ರತೀರ್ಥರು ಪಂಡಿತ ಸಭೆಯಲ್ಲಿ ವಿಮರ್ಶಿಸಿ ಈ ಸಂಪ್ರದಾಯವು ಅಶಾಸ್ತ್ರೀಯ ಎಂದು ತೀರ್ಮಾನಿಸಿದರು. ಈ ಅಶಾಸ್ತ್ರೀಯಸಂಪ್ರದಾಯವನ್ನು ಬಿಟ್ಟರು.

ಇದರಿಂದ ಹಿಂದಿನ ಪೀಠಾಧಿಪತಿಗಳೆಲ್ಲರೂ ದಡ್ಡರೆಂದು ಅಭಿಪ್ರಾಯವಲ್ಲ. ಪಂಚಾಂಗದಲ್ಲಿ ಬರುವ ದೋಷವು ಪಂಚಾಂಗಕರ್ತರ ಮೇಲಿನ

ನಂಬಿಕೆಯಿಂದಲೂ ಇತರ ವಿಷಯಗಳು ಅದಕ್ಕೆ ಸಂಬಂಧಿಸಿದ ಜನರ ಮೇಲಿನ ನಂಬಿಕೆಯಿಂದಲೂ ಶ್ರೀಗಳವರ ಗಮನಕ್ಕೆ ಸರಿಯಾಗಿ ಬಂದಿರುವುದಿಲ್ಲ. ಗಮನಕ್ಕೆ ಬಂದ ಕೂಡಲೇ ಅಪ್ರಾಮಾಣಿಕವಾದ ಮಾರ್ಗವನ್ನು ಬಿಟ್ಟು ಪ್ರಾಮಾಣಿಕವಾದ ಪ್ರಾಚೀನಸಂಪ್ರದಾಯವನ್ನು ಜಾರಿಗೆ ಅದೇ ಶ್ರೀಗಳವರೇ ತಂದಿರುತ್ತಾರೆ. ಅದಕ್ಕೆ ಅವರಿಗೆ ಅಧಿಕಾರವೂ ಇದೆ. ಆದ್ದರಿಂದಲೇ ಶ್ರೀಗಳವರಿಗೆ 'ಸರ್ವತಂತ್ರ ಸ್ವತಂತ್ರ' ಎಂಬ ಬಿರುದು ಬಂದಿರುತ್ತದೆ. ಶ್ರೀಗಳವರಲ್ಲಿ ಭಕ್ತಿಯುಳ್ಳ ಶಿಷ್ಯರೂ ಸಹ ಹಿಂದಿನ ಅಶಾಸ್ತ್ರೀಯ ಸಂಪ್ರದಾಯವನ್ನು ಬಿಟ್ಟು ಪ್ರಾಚೀನಶಿಷ್ಟಸಂಪ್ರದಾಯವನ್ನು ಅನುಷ್ಠಿಸಲು ಬದ್ಧರಾಗಿರುವರು.

ಶ್ರೀತ್ರಿವಿಕ್ರಮಪಂಡಿತಾಚಾರ್ಯರು ಶ್ರೀಅಚ್ಯುತಪ್ರೇಕ್ಷಾಚಾರ್ಯರು ಶ್ರೀಪದ್ಮನಾಭತೀರ್ಥರು ಶ್ರೀನರಹರಿತೀರ್ಥರು ಮುಂತಾದ ನಮ್ಮ ಮೂಲ ಪುರುಷರೂ ಸಹ ಶ್ರೀಮಧ್ವಾಚಾರ್ಯರ ಶಿಷ್ಯರಾದ ಮೇಲೆ ಪರಂಪರೆಯಿಂದ ಬಂದಿರುವ ತಮ್ಮ ಕುಲಕ್ರಮಾಗತಸಂಪ್ರದಾಯವನ್ನು ಬಿಟ್ಟು ಶಾಸ್ತ್ರೀಯ ಸಂಪ್ರದಾಯವನ್ನು ಸ್ವೀಕರಿಸಿರುವುದು ಅನಾದಿಸಂಪ್ರದಾಯವಾಗಿದೆ.

ಶ್ರೀರಾಘವೇಂದ್ರಮಠದ ಪಂಚಾಂಗದಲ್ಲಿಯೂ ಶ್ರೀರಾಘವೇಂದ್ರ ಗುರುಸಾರ್ವಭೌಮರ ಕಾಲದಲ್ಲಿದ್ದ ಸಂಪ್ರದಾಯಗಳಿಗೆ ವ್ಯತ್ಯಸ್ತವಾದ ಕೆಲವು ಸಂಪ್ರದಾಯಗಳು ನೆಲೆಗೊಂಡಿದ್ದವು. ಅವುಗಳನ್ನು ಶ್ರೀರಾಘವೇಂದ್ರ ಗುರುಸಾರ್ವಭೌಮರ ವಿದ್ಯಾಶಿಷ್ಯರಾದ ಶ್ರೀಕೃಷ್ಣಾಚಾರ್ಯರಿಂದ ರಚಿಸಲ್ಪಟ್ಟ ಗ್ರಂಥದ ಆಧಾರದಿಂದ ತಿಳಿದೆವು. ಈ ವಿಷಯವಾಗಿ ಮಂತ್ರಾಲಯದಲ್ಲಿ ಶ್ರೀ ೧೦೮ ಸುಜಯೀಂದ್ರತೀರ್ಥರ ಅಧ್ಯಕ್ಷತೆಯಲ್ಲಿ ವಿದ್ವತ್ಸಭೆಯು ನಡೆದು ವಿಮರ್ಶೆಯು ನಡೆಯಿತು. ಕೊನೆಗೆ ಸ್ಮೃತಿಮುಕ್ತಾವಲಿಯಲ್ಲಿ ಹೇಳಿರುವ ಪದ್ಧತಿಯನ್ನು ಅನುಸರಿಸಿ ಮಠದ ಪಂಚಾಂಗದಲ್ಲಿ ಎಲ್ಲಾ ನಿರ್ಣಯಗಳನ್ನೂ ಬರೆಯ ಬೇಕೆಂದೂ ಈ ಗ್ರಂಥಕ್ಕೆ ವಿರುದ್ಧವಾಗಿ ಹಿಂದೆ ಬರೆಯುತ್ತಿದ್ದ ನಿರ್ಣಯವನ್ನು ತ್ಯಜಿಸ ಬೇಕೆಂದೂ ತೀರ್ಮಾನವಾಯಿತು. ಶ್ರೀಗಳವರೂ ಆ ತೀರ್ಮಾನವನ್ನು ಅಂಗೀಕರಿಸಿದರು. ನನಗೂ ಅದರಂತೆಯೇ ನಿರ್ಣಯವನ್ನು ಬರೆಯುವಂತೆ ಆಜ್ಞಾಪಿಸಿದರು.

ಶ್ರೀರಿತ್ತಿಯವರು ಈ ತೀರ್ಮಾನಕ್ಕಿಂತ ಹಿಂದೆ ನಾನು ಬರೆದಿರುವ ನಿರ್ಣಯಕ್ಕೂ ಈಗ ಬರೆದಿರುವ ನಿರ್ಣಯಕ್ಕೂ ವಿರೋಧವನ್ನು ತೋರಿಸಿ ನನ್ನನ್ನು ವ್ಯಾಹತಭಾಷಿ ಎಂದು ದೂಷಿಸಿರುವರು. ಈ ದೂಷಣವು ನನಗೆ ಭೂಷಣವೇ ಹೊರತು ದೂಷಣವಲ್ಲ. ಯಾವುದೋ ಕಾರಣದಿಂದ ತಪ್ಪು ಮಾಡುತ್ತಿದ್ದವನು ತಪ್ಪನ್ನು ತಿದ್ದಿಕೊಂಡರೆ ಅದು ಭೂಷಣವಲ್ಲವೇ? ಶ್ರೀರಿತ್ತಿಯವರೂ ತಪ್ಪು ತಿಳಿವಳಿಕೆಯಿಂದ ನಮ್ಮ ನಿರ್ಣಯವನ್ನು ದೂಷಿಸಿದ್ದರೆ ತಪ್ಪು ತಿಳಿವಳಿಕೆಯನ್ನು ಬಿಟ್ಟು ತಿದ್ದಿಕೊಳ್ಳುವುದು ಅವರಿಗೆ ಭೂಷಣವೇ ಆಗುವುದು.

## ಧರ್ಮನಿರ್ಣಯದಲ್ಲಿ ಸಂಪ್ರದಾಯದ ಸ್ಥಾನ

(29) ಕ್ವಚಿತ್ಸಂಪ್ರದಾಯೋಽಪಿ ಪ್ರಮಾಣಂ. ತತ್ರ ಮನುಃ,

ಯೇನಾಸ್ಯ ಪಿತರೋ ಯಾತಾ ಯೇನ ಯಾತಾಃ ಪಿತಾಮಹಾಃ ।
ತೇನ ಯಾಯಾತ್ಸತಾಂ ಮಾರ್ಗೇ ತೇನ ಗಚ್ಛನ್ನ ದುಷ್ಯತಿ ॥

ಸ್ವಕುಲಕ್ರಮಾಗತಾಚಾರಃ ಸಂಪ್ರದಾಯಃ. ಸೋಽಪಿ ಶಾಸ್ತ್ರ ವಿಪ್ರತಿಪತ್ತೌ ಪ್ರಮಾಣಂ.

ಯತ್ರ ಶಾಸ್ತ್ರಗತಿರ್ಭಿನ್ನಾ ಸರ್ವಕರ್ಮಸು ಭಾರತ ।
ಉದಿತೇಽನುದಿತೇ ಚೈವ ಹೋಮಭೇದೋ ಯಥಾ ಭವೇತ್ ॥
ಯಸ್ಮಿನ್ ಕುಲೇ ಕ್ರಮಾಯಾತಮಾಚಾರಂ ತ್ವಾಚರೇದ್ಬುಧಃ ।
ಸ ಗರೀಯಾನ್ ಮಹಾಬಾಹೋ ಸರ್ವಶಾಸ್ತ್ರೋದಿತಾದಪಿ ॥
(ಇತಿ ಸುಮಂತುವಚನಾದಿತಿ)

"ನಮ್ಮ ಕುಲದಲ್ಲಿ ಹಿಂದಿನಿಂದ ಬಂದಿರುವ ಆಚಾರವು ಸಂಪ್ರದಾಯ ವೆನಿಸುತ್ತದೆ. ಈ ಆಚಾರವೂ ಸಹ ಕೆಲವು ಸಂದರ್ಭದಲ್ಲಿ ಧರ್ಮವನ್ನು ತಿಳಿಸುವ ವಿಷಯದಲ್ಲಿ ಪ್ರಮಾಣವಾಗುತ್ತದೆ. ಸಮಬಲವಾದ ಶಾಸ್ತ್ರದಲ್ಲಿ ಒಂದು ಕಡೆ ಒಂದು ಕಾರ್ಯವನ್ನು ಧರ್ಮವೆಂದೂ ಇನ್ನೊಂದು ಕಡೆ ಅದೇ ಕಾರ್ಯಕ್ಕೆ ವಿರುದ್ಧಕಾರ್ಯವನ್ನು ಧರ್ಮವೆಂದೂ ಹೇಳಿರುವುದುಂಟು.

ಅಂತಹ ಸಂದರ್ಭದಲ್ಲಿ ಎರಡುವಾಕ್ಯಗಳೂ ಸಮಬಲವುಳ್ಳವುಗಳಾಗಿರುವುದರಿಂದ ಅವುಗಳಲ್ಲಿ ಒಂದು ವಾಕ್ಯದಲ್ಲಿ ಹೇಳಿರುವ ಕಾರ್ಯವು ಧರ್ಮವೆಂದೂ ಇನ್ನೊಂದು ವಾಕ್ಯದಲ್ಲಿ ಹೇಳಿರುವ ಕಾರ್ಯವು ಅಧರ್ಮವೆಂದೂ ಹೇಳಕೂಡದು. ಎರಡುಕಾರ್ಯಗಳೂ ಧರ್ಮವೆಂದೇ ಹೇಳಬೇಕು.

"ಉದಾ—'ಉದಿತೇ ಹೋತವ್ಯಂ' 'ಅನುದಿತೇ ಹೋತವ್ಯಂ' ಎಂಬ ಎರಡುವಾಕ್ಯಗಳಿವೆ. ಅವುಗಳಲ್ಲಿ ಮೊದಲನೆಯ ವಾಕ್ಯವು ಸೂರ್ಯೋದಯವಾದ ಮೇಲೆ ಹೋಮವನ್ನು ಮಾಡಬೇಕೆಂದೂ ಇನ್ನೊಂದು ವಾಕ್ಯವು ಸೂರ್ಯೋದಯಕ್ಕಿಂತ ಪೂರ್ವದಲ್ಲಿಯೇ ಹೋಮವನ್ನು ಮಾಡಬೇಕೆಂದೂ ತಿಳಿಸುತ್ತದೆ. ಉದಿತಹೋಮ ಅನುದಿತಹೋಮ ಎಂಬ ಈ ಎರಡು ಕಾರ್ಯಗಳೂ ಪರಸ್ಪರವಿರುದ್ಧವಾಗಿವೆ. ಇವುಗಳೆರಡೂ ಧರ್ಮವಾಗಲು ಸಾಧ್ಯವಿಲ್ಲ. ಇವುಗಳಲ್ಲಿ ಯಾವುದು ಧರ್ಮ? ಯಾವುದು ಧರ್ಮವಲ್ಲ? ಎಂಬ ಸಂಶಯವು ಬರುತ್ತದೆ.

ಈ ಎರಡುವಾಕ್ಯಗಳೂ ವೇದವಾಕ್ಯಗಳು. ಈ ಎರಡುವಾಕ್ಯಗಳಿಗೂ ಪರಸ್ಪರವಿರುದ್ಧವಾದ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ನಿರವಕಾಶವಾಕ್ಯಗಳೆನಿಸುತ್ತವೆ. ಆದ್ದರಿಂದಲೇ ಎಲ್ಲಾ ವಿಧದಿಂದಲೂ ಸಮಬಲವಾಗಿವೆ. ಹೀಗೆ ಎರಡುವಾಕ್ಯಗಳೂ ಸಮಬಲವುಳ್ಳವುಗಳಾಗಿರುವುದರಿಂದ ಆ ಎರಡುವಾಕ್ಯಗಳಲ್ಲಿ ಹೇಳಿದ ಪರಸ್ಪರ ವಿರುದ್ಧವಾಗಿರುವ ಉದಿತಹೋಮ ಅನುದಿತಹೋಮ ಎಂಬ ಎರಡು ಹೋಮಗಳೂ ಧರ್ಮವೆನಿಸುತ್ತವೆ.

ಈ ಎರಡುಹೋಮಗಳನ್ನೂ ಒಬ್ಬನಿಂದ ಮಾಡಲು ಸಾಧ್ಯವಿಲ್ಲ. ಉದಯವಾದ ಮೇಲೆ ಹೋಮವನ್ನು ಮಾಡಿದರೆ ಉದಿತಹೋಮವನ್ನು ಮಾಡಿದಂತಾಯಿತೇ ಹೊರತು ಅನುದಿತಹೋಮವನ್ನು ಮಾಡಿದಂತಾಗುವುದಿಲ್ಲ. ಉದಯಕ್ಕಿಂತ ಪೂರ್ವದಲ್ಲಿ ಹೋಮವನ್ನು ಮಾಡಿದರೆ ಅನುದಿತ ಹೋಮವನ್ನು ಮಾಡಿದಂತಾಗುತ್ತದೆಯೇ ಹೊರತು ಉದಿತಹೋಮವನ್ನು ಮಾಡಿದಂತಾಗುವುದಿಲ್ಲ. ಆದ್ದರಿಂದ ಉದಿತಹೋಮವನ್ನು ಮಾಡಿದವನಿಗೆ ಅನುದಿತಹೋಮವನ್ನು ಬಿಟ್ಟ ದೋಷವೂ ಅನುದಿತಹೋಮವನ್ನು ಮಾಡಿ

ದವನಿಗೆ ಉದಿತಹೋಮವನ್ನು ಬಿಟ್ಟ ದೋಷವೂ ಬರುವುದಿಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ.

ಇಂತಹ ಸಂದರ್ಭದಲ್ಲಿ ಪರಸ್ಪರವಿರುದ್ಧವಾದ ಧರ್ಮಗಳಲ್ಲಿ ಎರಡು ಧರ್ಮಗಳನ್ನೂ ಅನುಷ್ಠಿಸಬೇಕಾಗಿಲ್ಲ. ಎರಡರಲ್ಲಿ ಯಾವುದಾದರೊಂದನ್ನು ಚುನಾಯಿಸಿ ಅನುಷ್ಠಿಸಬೇಕು. ಇನ್ನೊಂದನ್ನು ಬಿಡಬೇಕು. ಹೀಗೆ ಮಾಡಿದರೆ ಒಂದನ್ನು ಮಾಡಿ ಇನ್ನೊಂದನ್ನು ಬಿಟ್ಟದ್ದರಿಂದ ದೋಷವಿಲ್ಲ. ಇದನ್ನೇ ಶಾಸ್ತ್ರಕಾರರು ವಿಕಲ್ಪ ಎಂದು ಹೇಳುತ್ತಿರುವರು. ಈ ವಿಕಲ್ಪವನ್ನು ಆಶ್ರಯಿಸುವುದು ಸಕಲಪ್ರಾಮಾಣಿಕರಿಗೂ ಸಮ್ಮತವಾಗಿರುತ್ತದೆ.

ಈ ಎರಡುಧರ್ಮಗಳಲ್ಲಿ ಒಂದು ಧರ್ಮವನ್ನು ಚುನಾಯಿಸುವಾಗ ಯಾವ ಧರ್ಮವನ್ನು ಚುನಾಯಿಸಬೇಕು? ಎಂಬ ಪ್ರಶ್ನೆಯು ಬರುತ್ತದೆ. ಆಗ ತಮ್ಮ ಕುಲದಲ್ಲಿ ಹಿಂದಿನವರು ಈ ಎರಡು ಪರಸ್ಪರವಿರುದ್ಧವಾದ ಧರ್ಮಗಳಲ್ಲಿ ಯಾವ ಧರ್ಮವನ್ನು ಸ್ವೀಕರಿಸಿರುವರೋ ಆ ಧರ್ಮವನ್ನು ಚುನಾಯಿಸ ಬೇಕು. ನಮ್ಮ ಇಷ್ಟದಂತೆ ಚುನಾಯಿಸ ಬಾರದು. ಎಂದು ಶಾಸ್ತ್ರಕಾರರು ಹೇಳಿರುವರು.

ಆದ್ದರಿಂದ ಬೇರೆ ಪ್ರಮಾಣಗಳಿಂದ ಸಿದ್ಧವಾದ ಪರಸ್ಪರ ವಿರುದ್ಧವಾದ ಎರಡುಧರ್ಮಗಳಲ್ಲಿ ಯಾವ ಧರ್ಮವನ್ನು ಸ್ವೀಕರಿಸ ಬೇಕೆಂಬ ಸಂಶಯವು ಬಂದಿರುವಾಗ ಆ ಎರಡುಧರ್ಮಗಳಲ್ಲಿ ತಾವು ಅನುಷ್ಠಿಸ ಬೇಕಾದ ಧರ್ಮವನ್ನು ಚುನಾಯಿಸುವುದಕ್ಕೆ ಸದಾಚಾರವು ಉಪಯುಕ್ತವಾಗುತ್ತದೆಯೇ ಹೊರತು ಈ ಆಚಾರವೇ ಸ್ವತಂತ್ರವಾಗಿ ಯಾವ ಧರ್ಮವನ್ನೂ ತಿಳಿಸುವುದಿಲ್ಲ'' ಇದು ಸ್ಮೃತಿಮುಕ್ತಾವಲೀಕಾರರ ವಚನ.

ಸ್ಮೃತಿಮುಕ್ತಾವಲಿಯಲ್ಲಿ ಉದಾಹರಿಸಿರುವ ವಚನಗಳು ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಹೇಳಿರುವ ವಚನಗಳಿಗಿಂತ ಪ್ರಬಲವೆಂದು ಹಿಂದೆ ಸಮರ್ಥಿಸಿರುವೆನು. ಆದ್ದರಿಂದ ಈ ವಾಕ್ಯಗಳಿಗೆ ವಿರೋಧಿಗಳಾಗಿರುವ ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಉದಾಹರಿಸಿರುವ ವಾಕ್ಯಗಳಿದ್ದರೂ ಅವುಗಳನ್ನು ಲಕ್ಷಿಸದೆ ಈ ವಾಕ್ಯಗಳು ಧರ್ಮವನ್ನು ನಿರ್ಣಯಿಸುತ್ತವೆ.

ಎರಡುವಾಕ್ಯಗಳಿಗೂ ಬಲವು ಸಮಾನವಾಗಿದ್ದರೂ ಆ ಎರಡುವಾಕ್ಯಗಳಲ್ಲಿ ಹೇಳಿರುವ ಪರಸ್ಪರವಿರುದ್ಧವಾದ ಅಮಾವಾಸ್ಯಾಯುಕ್ತವಾದ ಪಾಡ್ಯದಲ್ಲಿ ಹಬ್ಬ, ಅಮಾವಾಸ್ಯಾಯುಕ್ತವಲ್ಲದ ಪಾಡ್ಯದಲ್ಲಿ ಹಬ್ಬ ಎಂಬ ಎರಡು ಹಬ್ಬಗಳೂ ವಿಕಲ್ಪದಿಂದ ಧರ್ಮವೆನಿಸುತ್ತವೆ. ಇವುಗಳಲ್ಲಿ ಶ್ರೀರಾಘವೇಂದ್ರ ಗುರುಗಳ ಕಾಲದಲ್ಲಿದ್ದ ಸಂಪ್ರದಾಯವನ್ನು ಅನುಸರಿಸಿರುವ ಮತ್ತು ಆ ವಂಶದ ಶ್ರೀಗಳವರ ಆಜ್ಞೆಯನ್ನು ಪಾಲಿಸಲು ಬದ್ಧರಾಗಿರುವ ಮಠೀಯರು ಅಮಾವಾಸ್ಯಾಯುಕ್ತ ಪಾಡ್ಯದಲ್ಲಿ ಹಬ್ಬವನ್ನು ಅನುಷ್ಠಿಸಲಿ. ಉಳಿದವರು ತಮ್ಮ ಕುಲಕ್ರಮಾಗತ ಸಂಪ್ರದಾಯದಂತೆ ಮಾಡಲಿ. ಹೀಗೆ ವಿಕಲ್ಪವನ್ನು ಆಶ್ರಯಿಸ ಬೇಕೇ ಹೊರತು ಅಮಾವಾಸ್ಯಾದಿನದಲ್ಲಿ ಹಬ್ಬವನ್ನು ಮಾಡುವುದು ಅಧರ್ಮ ಎಂದು ಹೇಳುವುದು ಯುಕ್ತವಾಗಲಾರದು.

ಧರ್ಮಸಿಂಧು ಮುಂತಾದ ಗ್ರಂಥಗಳಲ್ಲಿ ಉದಾಹರಿಸಿರುವ ಪ್ರಮಾಣ ವಚನಗಳಿಗಿಂತ ಸ್ಮೃತಿಮುಕ್ತಾವಲೀಗ್ರಂಥದಲ್ಲಿ ಉದಾಹರಿಸಿರುವ ವಚನಗಳು ದುರ್ಬಲವೆಂದು ಸಮರ್ಥಿಸಿದ ಮೇಲೆ ಈ ಮಾತನ್ನು ಹೇಳಿದರೂ ಹೇಳಬಹುದು. ಅದು ಸಾಧ್ಯವಿಲ್ಲವೆಂಬುದನ್ನು ಸಮರ್ಥಿಸಿರುವೆನು.

ಶ್ರೀರಾಘವೇಂದ್ರಗುರುಸಾರ್ವಭೌಮರು 'ಭಾಟ್ಟಸಂಗ್ರಹ' ಎಂಬ ಗ್ರಂಥವನ್ನು ಬರೆದಿರುವರು. ಆ ಗ್ರಂಥದಲ್ಲಿರುವ ಒಂದು ವಾಕ್ಯವನ್ನು ಕೆಳಗೆ ಕೊಟ್ಟಿರುವೆನು.

**(30) ಆಚಾರಾನ್ಮೂಲಸ್ಮೃತ್ಯನುಮಾನದ್ವಾರಾ ಶ್ರುತೇರನುಮಾತವ್ಯತ್ವೇನ ಸ್ಮೃತೇರಿವ ಸಾಕ್ಷಾಚ್ಛ್ರುತಿಮೂಲಕತ್ವಾಭಾವೇನ ಪ್ರಾಮಾಣ್ಯಸ್ಯ ವಿಪ್ರಕೃಷ್ಟತಯಾ ಸ್ಮೃತಿತೋ ದುರ್ಬಲತ್ವಾತ್ ತದ್ವಿರುದ್ಧಾಚಾರಾಣಾಂ ಧರ್ಮೇ ನ ಪ್ರಾಮಾಣ್ಯಂ.**

"ವೇದವೇ ಧರ್ಮವನ್ನು ತಿಳಿಸುತ್ತದೆ. ಸ್ಮೃತಿಗಳಾಗಲೀ ಸದಾಚಾರವಾಗಲೀ ತಮಗೆ ಮೂಲವಾಗಿರುವ ವೇದವನ್ನು ತಿಳಿಸಿ ಆ ವೇದದಿಂದಲೇ ಧರ್ಮವನ್ನು ತಿಳಿಸುತ್ತವೆ. ಇವುಗಳಲ್ಲಿ ಸದಾಚಾರವು ತನಗೆ ಮೂಲವಾದ ಸ್ಮೃತಿಯನ್ನು ತಿಳಿಸಿ ಆ ಸ್ಮೃತಿಯಿಂದ ಆ ಸ್ಮೃತಿಗೆ ಮೂಲವಾದ ವೇದವನ್ನು ತಿಳಿಸುತ್ತದೆ. ಹೀಗೆ ಪರಂಪರೆಯಿಂದ ಮೂಲವೇದವನ್ನು ತಿಳಿಸಿ ಆ ವೇದದಿಂದ

ಧರ್ಮವನ್ನು ಸದಾಚಾರವು ತಿಳಿಸುತ್ತದೆ. ಸ್ಮೃತಿಯು ಸಾಕ್ಷಾತ್ತಾಗಿಯೇ ತನಗೆ ಮೂಲವಾಗಿರುವ ವೇದವನ್ನು ತಿಳಿಸಿ ಆ ವೇದದಿಂದ ಧರ್ಮವನ್ನು ತಿಳಿಸುತ್ತದೆ. ಹೀಗೆ ಪರಂಪರೆಯಿಂದ ಮೂಲವೇದವನ್ನು ತಿಳಿಸುವ ಸದಾಚಾರಕ್ಕಿಂತ ಸಾಕ್ಷಾತ್ತಾಗಿ ಮೂಲವೇದವನ್ನು ತಿಳಿಸುತ್ತಿರುವ ಸ್ಮೃತಿಯು ಬಲಿಷ್ಠವಾಗಿದೆ. ಆದ್ದರಿಂದ ಸ್ಮೃತಿಗೂ ಆಚಾರಕ್ಕೂ ವಿರೋಧವು ಬಂದಾಗ ಬಲಿಷ್ಠವಾದ ಸ್ಮೃತಿಯಿಂದ ದುರ್ಬಲವಾಗಿರುವ ಆಚಾರವು ಬಾಧಿಸಲ್ಪಡುತ್ತದೆ.

ಇಂತಹ ಸಂದರ್ಭದಲ್ಲಿ ಆಚಾರವು ತನಗೆ ಮೂಲವಾದ ಸ್ಮೃತಿಯನ್ನು ತಿಳಿಸುವಾಗ ಆ ಆಚಾರಕ್ಕೆ ವಿರುದ್ಧವಾದ ಸ್ಮೃತಿಯು ಅಡ್ಡ ಬರುತ್ತದೆ. ಇದರಿಂದ ಸ್ಮೃತಿವಿರುದ್ಧವಾದ ಆಚಾರವು ತನಗೆ ಮೂಲವಾದ ಸ್ಮೃತಿಯನ್ನು ತಿಳಿಸುವುದಿಲ್ಲ. ಆಚಾರಕ್ಕೆ ಮೂಲವಾದ ಸ್ಮೃತಿಯು ಸಿದ್ಧವಾಗದಿರುವುದರಿಂದ ಆ ಸ್ಮೃತಿಯ ಮೂಲಕವಾಗಿ ಆಚಾರಕ್ಕೆ ಮೂಲವಾದ ವೇದವೂ ಸಿದ್ಧವಾಗುವುದಿಲ್ಲ. ಸ್ಮೃತಿವಿರುದ್ಧವಾದ ಆಚಾರಕ್ಕೆ ಮೂಲವಾದ ವೇದವೇ ಇಲ್ಲದಿರುವುದರಿಂದ ಆ ಆಚಾರದಿಂದ ವೇದದ ಮೂಲಕವಾಗಿ ಧರ್ಮವೂ ಸಿದ್ಧವಾಗುವುದಿಲ್ಲ. ಆದ್ದರಿಂದ ಆಚಾರವು ಸ್ಮೃತಿಗೆ ವಿರುದ್ಧವಾಗಿದ್ದರೆ ಧರ್ಮವನ್ನು ತಿಳಿಸುವುದಿಲ್ಲ.''

ರಿತ್ತಿಯವರೇ, ಶ್ರೀರಾಘವೇಂದ್ರತೀರ್ಥರ ಸಯುಕ್ತಿಕವಾದ ಈ ಮಾತನ್ನು ಕೇಳಿರಿ. ನೀವು ಹೇಳಿರುವ ಮತ್ತು ನಿಮ್ಮ ಹಸ್ತಪತ್ರಿಕೆಯಲ್ಲಿಯೂ ಪುಸ್ತಕದಲ್ಲಿಯೂ ಕನ್ನಡಪ್ರಭ ಪತ್ರಿಕೆಯಲ್ಲಿನ ಲೇಖನಗಳಲ್ಲಿಯೂ ನೀವು ತಿಳಿಸಿರುವ ಆಚಾರವು ಶ್ರೀರಾಘವೇಂದ್ರತೀರ್ಥರ ಉಪದೇಶದಿಂದ ಸ್ಮೃತಿಮುಕ್ತಾವಲಿಕಾರರು ತಿಳಿದು ಉದಾಹರಿಸಿರುವ ಸ್ಮೃತಿವಾಕ್ಯಗಳಿಗೆ ಅತ್ಯಂತ ವಿರುದ್ಧವಾಗಿವೆ ಎಂದು ಶ್ರೀಗುರುಸಾರ್ವಭೌಮರ ವಿದ್ಯಾಶಿಷ್ಯರಾದ ಸ್ಮೃತಿಮುಕ್ತಾವಲೀಕಾರರು ಹೇಳಿರುವರು. ಅದು ಮಾತ್ರವಲ್ಲ. ಶ್ರೀಗುರುಸಾರ್ವಭೌಮರು ತಮ್ಮ ಶಿಷ್ಯರ ಮೂಲಕವಾಗಿ ಹೇಳಿಸಿರುವರು. ಶ್ರೀಗುರುಸಾರ್ವಭೌಮರ ಮತ್ತು ಅವರ ಶಿಷ್ಯರ ಆಜ್ಞೆಗೆ ವಿರುದ್ಧವಾಗಿ ನಡೆದುಕೊಂಡು ಇತರ ಸಜ್ಜನರೂ ನಡೆದು ಕೊಳ್ಳುವಂತೆ ಮಾಡಬೇಕೆಂದು ಪ್ರಯತ್ನಿಸಿ ಮಹಾಪಾಪಕ್ಕೆ ಗುರಿಯಾಗಬೇಡಿರಿ.

ನಿಮ್ಮ ಲೇಖನದಲ್ಲಿ ನನ್ನನ್ನು ತುಂಬಾ ಬೈದಿರುವಿರಿ. ಅದನ್ನು ನಾನು ಲಕ್ಷಿಸುವುದಿಲ್ಲ. ಬುದ್ಧಿಯಿಲ್ಲದ ಚಿಕ್ಕಹುಡುಗರು ಬೈದರೆ ಕೋಪಿಸ ಬಾರದು. ಅಯ್ಯೋ ಪಾಪ. ಎಂದು ಕನಿಕರವನ್ನು ಪಡೆಯ ಬೇಕು. ಅದೇ ರೀತಿಯಲ್ಲಿ ನಿಮ್ಮಲ್ಲಿ ಕನಿಕರವೇ ಏರ್ಪಡುತ್ತದೆ. ಆದರೆ ಶ್ರೀಗಳವರ ಆಜ್ಞಾಪ್ರಕಾರ ವಾಗಿ ಪಂಚಾಂಗದಲ್ಲಿ ಹಾಕಿರುವ ನಿರ್ಣಯವನ್ನು ದೂಷಿಸುತ್ತಿರುವ ನೀವು ನನ್ನನ್ನು ದೂಷಿಸುತ್ತಿಲ್ಲ. ನನ್ನನ್ನು ದೂಷಿಸುವ ನೆಪದಿಂದ ಶ್ರೀಗಳವರನ್ನೂ ಸ್ಮೃತಿಮುಕ್ತಾವಲೀಕಾರರನ್ನೂ ಶ್ರೀರಾಘವೇಂದ್ರಗುರುಸಾರ್ವಭೌಮ ರನ್ನೂ ದೂಷಿಸುತ್ತಿರುವಿರಿ. ಕರುಣಾಳುಗಳಾದ ಅವರೆಲ್ಲರೂ ಸುಮ್ಮನಿದ್ದರೂ ಅವರಿಂದ ಉಪಾಸ್ಯನಾದ ಶ್ರೀಹರಿಯು ನಿಮ್ಮನ್ನು ನಿಗ್ರಹಿಸದಿರಲಾರನು

**ನವರಾತ್ರಿನಿರ್ಣಯದ ಬಗ್ಗೆ ಆಗ್ರಹವೇ?** (ಪುಟ 13) **"ಅಮಾಯುಕ್ತಪಾಡ್ಯದಲ್ಲಿ ಯುಗಾದಿಹಬ್ಬವನ್ನು ಹಿಂದೆ ಯಾರೂ ಮಾಡಿಲ್ಲ. ಈಗಲೂ ಇವರ ಅನುಯಾಯಿಗಳು ಹೊರತು ಯಾವ ಪ್ರಾಮಾಣಿಕರೂ ಇವರ ಪಂಚಾಂಗದಂತೆ ಅಮಾವಾಸ್ಯೆಯ ದಿನ ಯುಗಾದಿಹಬ್ಬವನ್ನು ಆಚರಿಸುತ್ತಲೂ ಇಲ್ಲ.**

ರಿತ್ತಿಯವರೇ, ನೀವು ನಿಮ್ಮ ಮಠದ ಅನಾದಿಸಂಪ್ರದಾಯವನ್ನು ತಿಳಿದಿರುವಿರಾ? ಶ್ರೀರಾಘವೇಂದ್ರಗುರುಸಾರ್ವಭೌಮರ ಕಾಲದಲ್ಲಿ ಅಮಾವಾಸ್ಯಾಯುಕ್ತಪಾಡ್ಯದಲ್ಲಿಯೇ ನವರಾತ್ರಿಹಬ್ಬವನ್ನು ಮಾಡಿರುವುದನ್ನು ಅವರ ಶಿಷ್ಯರಾದ ಶ್ರೀಕೃಷ್ಣಾಚಾರ್ಯರು ತಮ್ಮ ಗ್ರಂಥದಲ್ಲಿ ಸಮರ್ಥಿಸಿರುವುದಾಗಿ ಹಿಂದೆ ಸಮರ್ಥಿಸಿರುವೆನು. ಇಂತಹ ದಾಖಲೆಯು ನಿಮ್ಮಲ್ಲಿದೆಯೇ? ಈಗ ಯಾವ ಪ್ರಾಮಾಣಿಕರೂ ಅನುಷ್ಠಿಸುತ್ತಲಿಲ್ಲ ಎಂದು ಹೇಳಿರುವಿರಿ. ಆ ಪ್ರಾಮಾಣಿಕರು ನೀವೂ ನಿಮ್ಮ ಹೆಂಡತಿಯೂ ಮಕ್ಕಳೂ ನಿಮ್ಮ ಗುಂಪಿಗೆ ಸೇರಿದ ನಾಲ್ಕು ಜನರೇ?

ಈ ಪಂಚಾಂಗದಲ್ಲಿ ಬರೆದಂತೆ ಅಮಾವಾಸ್ಯಾದಿನದಲ್ಲಿ ನವರಾತ್ರಾರಂಭವನ್ನು ನಿಮ್ಮ ಗುರುಗಳಾದ ಶ್ರೀ ೧೦೮ ಸುಜಯೀಂದ್ರತೀರ್ಥರು ಮಾಡಿರುವರು. ಅವರು ಅಪ್ರಾಮಾಣಿಕರೇ? ಮಂತ್ರಾಲಯದಲ್ಲಿರುವ ಮೂಲಬೃಂದಾವನಸನ್ನಿಧಿಯಲ್ಲಿಯೂ ಎಲ್ಲಾ ಶಾಖಾಮಠಗಳಲ್ಲಿಯೂ

ಅನುಷ್ಠಿಸಲ್ಪಟ್ಟಿತು. ಅಶಾಸ್ತ್ರೀಯವಾದ ಸಂಪ್ರದಾಯವು ಇರುವ ಆ ಮಠಗಳಿಗೆ ನೀವು ಅಲಂಕಾರಭೋಜನಕ್ಕಾಗಿ ಹೋಗುವುದನ್ನು ನಿಲ್ಲಿಸುವಿರೇ? ಮಠದ ಎಲ್ಲಾ ಪಂಡಿತರೂ ಶ್ರೀಗಳವರಲ್ಲಿಯೂ ಮಠದಲ್ಲಿಯೂ ಭಕ್ತಿಯುಳ್ಳ ಸಕಲಸಜ್ಜನರೂ ಅನುಷ್ಠಿಸಿರುವರು. ಅವರೆಲ್ಲರೂ ಅಪ್ರಾಮಾಣಿಕರೇ? ಅವರೆಲ್ಲರನ್ನೂ ಅಪ್ರಾಮಾಣಿಕರೆಂದು ಹೇಳುತ್ತಾ, ಗುರುಗಳನ್ನೂ ಅಪ್ರಾಮಾಣಿಕರೆಂದು ಹೇಳುತ್ತಿರುವ ನೀವಲ್ಲವೇ ಪ್ರಾಮಾಣಿಕರು?

ರಿತ್ತಿಯವರೇ, ನೀವು ದೊಡ್ಡ ಸಿಂಹ, ಆದರೆ ಕಾಡಿನಲ್ಲಿಲ್ಲ, ಊರಿನಲ್ಲಿರುವಿರಿ, ನಿಮ್ಮ ಗರ್ಜನೆಯನ್ನು ಕೇಳಿ ಅಭ್ಯಾಸವಾಗಿದೆ. ಯಾರೂ ಅಂಜುವವರಿಲ್ಲ. ನೀವು ಶ್ರೀಗಳವರಲ್ಲಿ ವಿಷವನ್ನು ಕಾರುತ್ತಿರುವಿರಿ. ನಿಮಗೂ ನಿಮ್ಮ ಅನುಯಾಯಿಗಳಿಗೂ ಇದು ಸ್ವಭಾವ. ಆದರೆ ಶ್ರೀಗಳವರಿಗಾಗಲೀ ಅಪರ ಅನುಯಾಯಿಗಳಿಗಾಗಲೀ ಇದರಿಂದ ಯಾವ ಹಾನಿಯೂ ಇಲ್ಲ.

ಶ್ರೀಗಳವರು ನಿಮ್ಮ ಗುರುಗಳಾಗಿರುವರು. ಪರಮಪೂಜ್ಯ ಶ್ರೀ ೧೦೮ ಸುಯಮೀಂದ್ರತೀರ್ಥರು ಇವರಿಗೆ ಫಲಮಂತ್ರಾಕ್ಷತೆ ಕೊಡುವುದಕ್ಕೆ ಹಿಂದಿನ ದಿನದಲ್ಲಿ ರಾತ್ರೆ ಹನ್ನೊಂದು ಗಂಟೆಗೆ ಇವರಿಗೆ ಆಶ್ರಮವನ್ನು ಕೊಡುವ ಔಚಿತ್ಯವನ್ನು ಕುರಿತು ನನ್ನಲ್ಲಿ ಏಕಾಂತದಲ್ಲಿ ಹೇಳಿರುವ ಒಂದೆರಡು ಮಾತುಗಳು ಇವರಲ್ಲಿ ನನಗೆ ವಿಶೇಷಭಕ್ತಿಗೆ ಕಾರಣವಾಗಿವೆ. ಈಗ ಅದೇ ಶ್ರೀ ೧೦೮ ಸುಯಮೀಂದ್ರತೀರ್ಥರು ಇವರ ಮೂಲಕವಾಗಿ ತಾನು ಕನಸುಕಂಡ ಮಹಾಕಾರ್ಯಗಳನ್ನು ಮಾಡಿಸುತ್ತಿರುವರು. ಪ್ರತಿವರ್ಷ ಎರಡು ಸಲ ವಿದ್ವತ್ಸಭೆಯನ್ನು ನಡೆಯಿಸಿ ಪ್ರಪಂಚದ ಮೂಲೆ ಮೂಲೆಗಳಿಂದ ವಿದ್ವಾಂಸರುಗಳನ್ನು ಕರೆತರಿಸಿ ಗೌರವಿಸುತ್ತಿರುವರು. ಶ್ರೀಯಲತ್ತೂರು ಕೃಷ್ಣಾಚಾರ್ಯರಂತಹ ಉದ್ದಾಮಪಂಡಿತರುಗಳಿಂದಲೂ ಶ್ರೀ ೧೦೮ ಸುಶೀಲೇಂದ್ರತೀರ್ಥರಿಂದಲೂ ಸಂಪಾದಿಸಿದ ಜ್ಞಾನವನ್ನು ವೃದ್ಧಿಗೊಳಿಸಿ ಕೊಳ್ಳುತ್ತಿರುವರು. 'ಸುರಪನಾಲಯದಂತೆ ಮಂತ್ರಾಲಯ' ಎಂದು ಎಂದೋ ಕಂಡ ಕನಸನ್ನು ಪ್ರತ್ಯಕ್ಷವಾಗುವಂತೆ ಮಾಡಿರುವರು. ಇಂತಹ ಮಹಾಪುರುಷರು ಮಾಡಿರುವ ನಿರ್ಣಯ ಅಪ್ರಾಮಾಣಿಕವಲ್ಲವೇ? ಶ್ರೀಗಳವರನ್ನು ಇಷ್ಟು ಹೀಯಾಳಿಸುತ್ತಿರುವ ನಿಮಗೆ ಅವರ ಯೋಗ್ಯತಾಂಶದಲ್ಲಿ ಕೋಟ್ಯಂಶದಲ್ಲಿ ಒಂದಂಶ

ವಾದರೂ ಇದೆಯೇ? ಪುಠದಲ್ಲಿರುವ ಪಂಡಿತರ ಅಥವಾ ಇತರ ಪಂಡಿತರ ಯೋಗ್ಯತಾಂಶದಲ್ಲಿ ಏಕಾಂಶವೂ ವ್ಯಾಹತಿ ವಾರಿಧಿ ಯಾಗಿರುವ ನಿಮ್ಮ ಲ್ಲಿದೆಯೇ?

ನೀವು ಮಾಡಿರುವ ನಿರ್ಣಯದಿಂದ ನೀವು ವ್ಯಾಹತಿ ವಾರಿಧಿ, ಮಿಥ್ಯಾವಾದಿಶಿರೋಮಣಿ ಮುಂತಾದ ಬಿರುದುಗಳನ್ನು ನೀವೇ ಸ್ವತಃ ಸಂಪಾದಿಸಿರುವ ಕತೆಯನ್ನೂ ನಿಮ್ಮ ಧರ್ಮಶಾಸ್ತ್ರವಿದ್ವಾನ್ ಎಂಬ ಬಿರುದಿನ ರಹಸ್ಯವನ್ನೂ ಹಿಂದೆ ವಿವರಿಸಿರುವೆನು.

ಮಹನೀಯರೇ? ನಿಮ್ಮ ಬಿರುದುಗಳಲ್ಲಿ ಒಂದು ಈಗ ನೆನಪಿಗೆ ಬಂತು. ಅದನ್ನು ಹೇಳಿ ನನ್ನ ಈ ಲೇಖನವನ್ನು ಮುಗಿಸುವೆನು. 'ರಿತ್ತಿಮಠದ ಪರ್ಯಾಯಸ್ಥನಾದ ನಾನು' ಎಂದು ನಿಮ್ಮ ಗರ್ಜನೆಯನ್ನು ಕೇಳಿ ಹೆದರಿದೆ. ಕೊನೆಗೆ ಅದರ ರಹಸ್ಯವು ತಿಳಿಯಿತು. ನೀವು ರಿತ್ತಿಯ ಮಠದಲ್ಲಿ ಅರ್ಚಕರಂತೆ. ಆ ಪೂಜೆಯೂ ಯಾವಾಗಲೂ ಇಲ್ಲವಂತೆ. ಯಾವಾಗಲೋ ಒಮ್ಮೆ ಬರುತ್ತದೆಯಂತೆ. ಆ ಅರ್ಚಕರಿಗೆ ಯಾವ ಶಾಸ್ತ್ರದ ಪರಿಚಯವೂ ಇರ ಬೇಕಾದ ನಿರ್ಬಂಧವಿಲ್ಲವಂತೆ. ಆ ಪೂಜೆಯೂ ಶ್ರೀರಾಘವೇಂದ್ರಮಠದ ಪೀಠಾಧಿಪತಿಗಳು ಕೊಟ್ಟಿರುವ ಭಿಕ್ಷೆಯಂತೆ. ಆ ಭಿಕ್ಷೆಯನ್ನೂ ಆ ಪೀಠದಲ್ಲಿ ಬಂದಿರುವ ಈಗಿನ ಶ್ರೀಗಳವರು ತಪ್ಪಿಸುವ ಅಧಿಕಾರವನ್ನು ಪಡೆದಿರುವರಂತೆ.

ರಿತ್ತಿಯವರೇ, ಅರ್ಚಕರಾದ ನಿಮಗೆ ಅರ್ಚಕತ್ವದಿಂದ ಧರ್ಮಶಾಸ್ತ್ರ ಜ್ಞಾನವು ಬಂದಂತಾಯಿತೇ? ಪಂಚಾಂಗಖಂಡನಕ್ಕಾಗಿ ಬೇಕಾದ ಯೋಗ್ಯ ತಾಂಶವನ್ನು ತಿಳಿಸುವಾಗ ರಿತ್ತಿ ಮಠದ ಪರ್ಯಾಯಸ್ಥನು ನಾನು ಎಂದು ಎದೆ ತಟ್ಟಿಕೊಳ್ಳುವ ಅವಶ್ಯವೇನು? 'ನನಗೆ ಭಿಕ್ಷೆಯನ್ನಿತ್ತಿರುವ ಗುರುಗಳನ್ನು ಧಿಕ್ಕರಿಸುವ ಮಹಾಪುರುಷನು ನಾನು' ಎಂದು ತಿಳಿಸುವುದಲ್ಲದೆ ಬೇರೆ ಪ್ರಯೋಜನವೇನಿದೆ?

ರಿತ್ತಿಯವರೇ? ನಿಮ್ಮ ಗರ್ಜನೆಯು ನಿಷ್ಫಲ. ನೀವು ಎಂದೋ ಮಠದ ಪಂಚಾಂಗವನ್ನು ಬಿಟ್ಟು ಬೇರೆ ಪಂಚಾಂಗವನ್ನು ಸ್ವೀಕರಿಸಿರುವಿರಿ. ನೀವು ಪ್ರಮಾಣವಾಗಿ ಸ್ವೀಕರಿಸದಿರುವ ಪಂಚಾಂಗದ ವಿಷಯದಲ್ಲಿ ನಿಮಗೆ ಅಕ್ಕರೆ ಯೇನಿದೆ? ಅಪ್ರಾಮಾಣಿಕರು ಅದರಂತೆ ಅನುಷ್ಠಿಸಲಿ. ನೀವು ಪ್ರಾಮಾಣಿ

ಕರಲ್ಲವೇ ? ಪ್ರಾಮಾಣಿಕಪಂಚಾಂಗದಂತೆ ಅನುಷ್ಠಾನ ಮಾಡಿರಿ. ಆ ಪ್ರಾಮಾಣಿಕಪಂಚಾಂಗದಲ್ಲಿ ಬರೆದಂತೆ ಶಿವರಾತ್ರಿಉಪವಾಸವನ್ನು ಮಾಡಿರಿ. ಅವರ ಧರ್ಮಶಾಸ್ತ್ರದಲ್ಲಿ ಹೇಳಿದಂತೆ ಭಸ್ಮಧಾರಣವನ್ನೂ ಏಕಾದಶೀಶ್ರಾದ್ಧವನ್ನೂ ರುದ್ರಾಕ್ಷಧಾರಣವನ್ನೂ ಮಾಡಿರಿ. ನಿಮ್ಮ ಸದಾಚಾರಕ್ಕೂ ನಿಮಗೂ ವಂದನೆಗಳು.

ಶಾಂತವಾದ ಶಬ್ದಗಳಿಂದ ಲೇಖನವನ್ನು ಬರೆಯಬೇಕೆಂದು ಸಂಕಲ್ಪಿಸಿದೆನು. ನಿಷ್ಠುರವಾದ ಶಬ್ದಗಳನ್ನೇ ನಿಮ್ಮ ಲೇಖನದಲ್ಲಿ ತುಂಬಿಸಿರುವಿರಿ. ಇಂತಹ ಮಾರ್ಜಾಲಸನ್ಯಾಸಿಯಾಗಿರುವ ನಿಮಗೆ 'ಶಠೇ ಶಾಠ್ಯಂ' ಎಂಬ ನ್ಯಾಯವನ್ನು ಅನುಸರಿಸಿ ನಿಷ್ಠುರಶಬ್ದಗಳಿಂದಲೇ ಉತ್ತರವು ಶ್ರೀಹರಿಯ ಪ್ರೇರಣೆಯಿಂದ ಬರೆಯಲ್ಪಟ್ಟಿತು. ಇದನ್ನು ಶ್ರೀರಾಘವೇಂದ್ರಗುರುಗಳ ಅಂತರ್ಯಾಮಿಯಾದ ಶ್ರೀಮೂಲರಾಮದೇವನಿಗೆ ಸಮರ್ಪಿಸುವೆನು. ಮಂಗಲವಾಗಲಿ.

14-2-73
ಮದ್ರಾಸ್

ಪಿ. ಪಿ. ಲಕ್ಷ್ಮೀನಾರಾಯಣಉಪಾಧ್ಯಾಯ





यत्र यत्र रघुनाथकीर्तनं
तत्र तत्र कृतमस्तकाञ्जलिम्
बाष्पवारिपरिपूर्णलोचनं
मारुतिं नमत राक्षसान्तकम् ॥

# ಶ್ರೀರಾಘವೇಂದ್ರ ತೀರ್ಥರು



Dharmaprakash Press, Madras-600084